











1. ತಿರುಮಲೆಯಲ್ಲಿ ಸ್ವಾಮಿ ಪವಿತ್ರೋತ್ಸವ.
2. ಇ. ಓ. ಡಾ॥ ಕೃಷ್ಣಯ್ಯ ಅವರಿಂದ ಸ್ವಾಮಿ ಪ್ರಸಾದಗಳನ್ನು ಸ್ವೀಕರಿಸುತ್ತಿರುವ ಆಂ.ಪ್ರ. ಮುಖ್ಯಮಂತ್ರಿ ಶ್ರೀ ನಾರಾ ಚಂದ್ರಬಾಬು ನಾಯುಡು.
3. ಇ.ಓ. ಡಾ॥ ಪಿ. ಕೃಷ್ಣಯ್ಯನವರಿಂದ ಸ್ವಾಮಿ ಪ್ರಸಾದಗಳನ್ನು ಸ್ವೀಕರಿಸುತ್ತಿರುವ ತಿ.ತಿ.ದೇ. ಧರ್ಮಕರ್ತರಮಂಡಳಿಯ ಸದಸ್ಯರು ಶ್ರೀ ಡಿ. ರಾಮಾನಾಯುಡು.
4. ತಿರುಪತಿ ಎಸ್.ವಿ. ಡೈರಿ ಫಾರಂನಲ್ಲಿ ಗೋಕುಲಾಷ್ಟಮಿ ಉತ್ಸವ.
5. ತಿ.ತಿ.ದೇ. ಧರ್ಮಕರ್ತರ ಮಂಡಳಿಯ ಅಧ್ಯಕ್ಷ ಶ್ರೀ ಪಿ. ಚಲಪತಿ ರಾವ್ ಅವರಿಂದ ಪ್ರಸಾದಗಳನ್ನು ಸ್ವೀಕರಿಸುತ್ತಿರುವ ಕಾಶ್ಮೀರದ ಮುಖ್ಯಮಂತ್ರಿ ಡಾ॥ ಫಾರೂಕ್ ಅಬ್ದುಲ್ಲಾ.
6. ಕಾರ್ಯನಿರ್ವಹಣಾಧಿಕಾರಿ ಗಳಿಂದ ಪ್ರಸಾದ ಸ್ವೀಕರಿಸುತ್ತಿರುವ ತಿ.ತಿ.ದೇ. ಧರ್ಮಕರ್ತರ ಮಂಡಳಿಯ ಸದಸ್ಯರು ಶ್ರೀ ಮನೋಜಕುಮಾರ್ ಸಂತಾಲಿಯ.



ಪಾಪೋಸು ಹೋದುವಲ್ಲ ಸ್ವಾಮೀ ಎನ್ನ
ಪಾಪೋಸು ಹೋದುವಲ್ಲ || ಪ ||
ಅಪಾರ ದಿನಗಳಿಂದ ಆರ್ಜನೆ ಮಾಡಿದ || ಅ.ಪ. ||
ಉರಗಾದ್ರಿಯಲಿ ಸ್ವಾಮಿಪುಷ್ಕರಿಣಿ ಮೊದಲಾದ
ಪರಿಪರಿ ತೀರ್ಥ ಸ್ನಾನಗಳ ಮಾಡಿ
ಹರಿದಾಸರ ಕೂಡಿ ಗಿರಿರಾಯನ ಮೂರ್ತಿ
ದರುಶನದಲ್ಲಿ ಮೈಮರೆತಿರಲು ಎನ್ನ || 1 ||
ಪರಮ ಭಾಗವತರ ಹರಿಕಥೆ ಕೇಳಲು
ಪರಮ ಭಕುತಿಯಿಂದ ಕೇಳುತಿರೆ
ಪರಮ ಪಾಪಿಗಳ ಪಾಲಾಗಿ ಪೋದುವು
ಪರಮ ಪುರುಷನ ಮನಸಿಗೆ ಬಂದೀಗ || 2 ||
ಮಾಯಾದೇವಿ ಎನಗೆ ಮೆಚ್ಚಿ ಕೊಟ್ಟಿದ್ದಳು
ದಾಯಾದಿಗಳು ನೋಡಿ ಸಹಿಸಲಿಲ್ಲ
ಮಾಯಾರಮಣ ನಮ್ಮ ಪುರಂದರವಿಠಲನ
ಮಾಯದಿಂದಲಿ ಮಟ್ಟಮಾಯವಾದವು ಎನ್ನ || 3 ||

-ಪುರಂದರದಾಸರು.

ಸಂದರ್ಶಿಸಿ.   ಆನಂದಿಸಿ.

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ
## ತಿರುಮಲೆ

## ವಾರ್ಷಿಕ ಬ್ರಹ್ಮೋತ್ಸವಗಳು



6-10-2002 ರಿಂದ
15-10-2002 ವರೆಗೆ

### ಉತ್ಸವ ಕಾರ್ಯಕ್ರಮ

| ದಿನಾಂಕ | ವಾರ | ಹಗಲು ಉತ್ಸವ | ರಾತ್ರಿ ಉತ್ಸವ |
|---|---|---|---|
| 6-10-2002 | ಭಾನುವಾರ | | ಸೇನಾಪತಿ ಉತ್ಸವ - ಅಂಕುರಾರ್ಪಣೆ. |
| 7-10-2002 | ಸೋಮವಾರ | ಧ್ವಜಾರೋಹಣ | ದೊಡ್ಡ ಶೇಷವಾಹನ. |
| 8-10-2002 | ಮಂಗಳವಾರ | ಚಿಕ್ಕ ಶೇಷವಾಹನ | ಹಂಸವಾಹನ. |
| 9-10-2002 | ಬುಧವಾರ | ಸಿಂಹವಾಹನ | ಮುತ್ತಿನ ಚಪ್ಪರ ವಾಹನ |
| 10-10-2002 | ಗುರುವಾರ | ಕಲ್ಪವೃಕ್ಷವಾಹನ | ಹನುಮಂತವಾಹನ |
| 11-10-2002 | ಶುಕ್ರವಾರ | ಮೋಹಿನೀ ಅವತಾರ | ಗರುಡವಾಹನ. |
| 12-10-2002 | ಶನಿವಾರ | ಹನುಮಂತವಾಹನ<br>ಸಂಜೆ - ವಸಂತೋತ್ಸವ<br>ಸುವರ್ಣರಥರಂಗ ಡೋಲೋತ್ಸವ | ಗಜವಾಹನ. |
| 13-10-2002 | ಭಾನುವಾರ | ಸೂರ್ಯಪ್ರಭವಾಹನ | ಚಂದ್ರಪ್ರಭವಾಹನ. |
| 14-10-2002 | ಸೋಮವಾರ | ರಥೋತ್ಸವ | ಅಶ್ವವಾಹನ. |
| 15-10-2002 | ಮಂಗಳವಾರ | ಚಕ್ರಸ್ನಾನ | ಧ್ವಜಾವರೋಹಣ. |

**ಸೂಚನೆ :** ಬ್ರಹ್ಮೋತ್ಸವದ ದಿನಗಳಲ್ಲಿ ದಿನವೂ ಸಾಂಸ್ಕೃತಿಕ ಕಾರ್ಯಕ್ರಮಗಳಿರುತ್ತವೆ. ಪುಸ್ತಕ ಪ್ರದರ್ಶನ ಮಾರಾಟಗಳುಂಟು.

ನೀವೂ ಬನ್ನಿ.   ನಿಮ್ಮವರನ್ನೂ ಕರೆತನ್ನಿ.

# ಸಪ್ತಗಿರಿ



ಸಂಪುಟ - 33 ಅಕ್ಟೋಬರ್ 2002 ಸಂಚಿಕೆ - 5

## ಭಾದ್ರಪದ-ಆಶ್ವಯುಜ ಸಂಚಿಕೆ

### ವಿಷಯಸೂಚಿ



ಮುಖಚಿತ್ರ : ಗರುಡವಾಹನನಾಗಿ ಸ್ವಾಮಿ.

ಹಿಂಬದಿಯಲ್ಲಿ : ತಿರುಮಲೆಯ ಆಲಯ.

**WWW.Tirumala.Com ವಿಳಾಸದಿಂದ ಇಂಟರ್ ನೆಟ್‌ನಲ್ಲಿ ತಿ.ತಿ.ದೇ.ಗಳ ಬಗ್ಗೆ ವಿವರಗಳನ್ನು ಪಡೆಯಬಹುದು.**


ಗೌರವ ಸಂಪಾದಕರು :
**ಡಾ॥ ಪಿ. ಕೃಷ್ಣಯ್ಯ,** ಐ.ಎ.ಎಸ್.,
ಕಾರ್ಯನಿರ್ವಹಣಾಧಿಕಾರಿ,
ತಿ.ತಿ.ದೇ. ತಿರುಪತಿ.

ಸಂಪಾದಕ :
**ಡಾ॥ ಎನ್.ಎಸ್. ರಾಮಮೂರ್ತಿ,**

ಮುದ್ರಣ :
**ಐ. ಪಾರ್ವತೀಶ್ವರ ರಾವ್,**
ಬಿ.ಎ., ಎಲ್.ಪಿ..ಟಿ.,
ಮ್ಯಾನೇಜರ್,
ತಿ.ತಿ.ದೇ. ಮುದ್ರಣಾಲಯ, ತಿರುಪತಿ.

ಉಪಸಂಪಾದಕ :
**ಬಿ. ಎನ್. ಶ್ರೀನಿವಾಸನ್,** ಎಂ.ಎ.

ಲೇಖನ/ಜಾಹೀರಾತುಗಳಿಗೆ ಮಿಕ್ಕ ವಿವರಗಳಿಗೆ-
ಸಂಪಾದಕರು
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ.

**ಬಿಡಿ ಪ್ರತಿ ರೂ. 5/-**
**ವಾರ್ಷಿಕ ಚಂದಾ ರೂ. 60/-**
**ಆಜೀವ ಚಂದಾ ರೂ. 500/-**




ವೇಂಕಟಾದ್ರಿ ಸಮಂಸ್ಥಾನಂ ಬ್ರಹ್ಮಾಂಡೇ ನಾಸ್ತಿ ಕಿಂಚನ । ವೇಂಕಟೇಶ ಸಮೋದೇವೋ ನ ಭೂತೋ ನ ಭವಿಷ್ಯತಿ ॥

# ನಿಮ್ಮೊಡನೆ ಎರಡು ಮಾತು......



ಬ್ರಹ್ಮ ಆರಂಭಿಸಿದ ಉತ್ಸವವನ್ನು ಬ್ರಹ್ಮೋತ್ಸವ ಎಂದು ಕರೆದರು. ತಿರುಮಲೆಯ ಸ್ವಾಮಿ ಅತ್ಯಂತ ಹೆಚ್ಚಿನ ಭಕ್ತರನ್ನು ಆಕರ್ಷಿಸುವ ದಿನಗಳು ಬ್ರಹ್ಮೋತ್ಸವ ಎಂದು, ಭಕ್ತರ ಸಂಖ್ಯೆಯ ದೃಷ್ಟಿಯಿಂದಲೂ ಬ್ರಹ್ಮಾಂಡವೇ ನೆರೆದು ನೋಡುವ, ಆಚರಿಸುವ ಉತ್ಸವವಾಗಿ ಬ್ರಹ್ಮೋತ್ಸವ ಎಂದರೂ ಅತಿಶಯವಿಲ್ಲ. ಕಾರಣ - ವರ್ಷದ ಎಲ್ಲ ಉತ್ಸವಗಳಿಗಿಂತಲೂ ಹೆಚ್ಚಿನ ಯಾತ್ರಿಕ ಭಕ್ತರು ಬ್ರಹ್ಮೋತ್ಸವದಲ್ಲಿ ಸ್ವಾಮಿಯನ್ನು ದರ್ಶಿಸಲು ಬರುವಿಕೆ.

ಇಂತಹ ಬ್ರಹ್ಮಾಂಡವಾದ ಉತ್ಸವದಲ್ಲಿ ತಿರುಮಲೆಯಲ್ಲಿ ಎಲ್ಲಿ ನೋಡಿದರೂ ಜನವೇ ಕಂಡುಬಂದು, ಅವರಿಗೆ ಜನರೂಪಿ ಜನಾರ್ದನನು ಕಂಡುಬರುವಲ್ಲಿ ಆಚ್ಚರಿಯಿಲ್ಲ. ವಿಜಯದಾಸರು ಅದನ್ನೇ ವಿವರಿಸಿ ಹೇಳಿದರು - 'ನಿನ್ನ ನೋಡಲು ಬರಲಿಲ್ಲವೊ ನಿನ್ನ ಭಕುತರ ನೋಡಲು ಬಂದೆನು.' ಅವರಿಗೆ ಅನ್ನಿಸಿದಂತೆ ಬೇರೆ ಎಲ್ಲಿತಾನೇ ಇಷ್ಟು ಜನ ಬಂದು ಸೇರುತ್ತಾರೆ. ಹಾಗಾಗಿ ಭಗವದ್ಭಕ್ತರನ್ನೆಲ್ಲಾ ಒಟ್ಟಿಗೆ ಹೆಚ್ಚಿಗೆ ನೋಡಲೂ ಸಹ ಬ್ರಹ್ಮೋತ್ಸವಕ್ಕೇ ಬರಬೇಕು.

ಇಷ್ಟು ಮಂದಿಯ ಅಶನ ವಸತಿ ದರ್ಶನ ಸೌಲಭ್ಯಗಳು ಸುಗಮವಾಗಿ, ಸುಲಲಿತವಾಗಿ ಸಾಧಿಸುವಂತೆ ಆಗಲು ತಿ. ತಿ. ದೇವಸ್ಥಾನಗಳು ಪ್ರಯತ್ನಿಸುತ್ತಿದೆ. ಹಲವು ಹನ್ನೊಂದು ರೀತಿಯಲ್ಲಿ ಮಾಡಬೇಕಾದವುಗಳ ಪಟ್ಟಿಯನ್ನು ಮೊದಲೇ ಸಿದ್ಧಗೊಳಿಸಿಕೊಂಡು ಅದಕ್ಕೆ ತಕ್ಕ ಯೋಜನೆಗಳನ್ನು ಹಾಕಿಕೊಂಡು, ಜವಾಬ್ದಾರಿಗಳನ್ನು ಮೊದಲೇ ನಿರ್ಧರಿಸಿಕೊಂಡು ನಡೆಯಲಾಗುತ್ತಿದೆ. ಮೊದಲು ಬಂದವರಿಗೆ ಮೊದಲು ವಸತಿ ಸೌಲಭ್ಯ, ಮೊದಲು ದರ್ಶನ ಸೌಲಭ್ಯಗಳನ್ನು ಏರ್ಪಡಿಸುವ ವ್ಯವಸ್ಥೆಯಾಗಿದೆ. ಪರಿಶುಭ್ರತೆಯನ್ನು ಕಾಪಾಡಿಕೊಳ್ಳಲು ಹಗಲು ರಾತ್ರಿಯ ಪಾಳಿಗಳಲ್ಲಿ ಉದ್ಯೋಗಿಗಳನ್ನು ಆಯೋಜಿಸಲಾಗಿದೆ. ಪರಿರಕ್ಷಣೆ, ಪರ್ಯಾವರಣಗಳ ಬಗ್ಗೆ ಆದ್ಯತೆಯ ಎಚ್ಚರಿಕೆ ಹೊಂದಿ ಕೆಲಸಮಾಡಲಾಗುತ್ತಿದೆ. ಶಿಸ್ತು ಸಂಯಮಗಳನ್ನು ಪಾಲಿಸಲು ಖಚಿತವಾದ ಮೇಲುಸ್ತುವಾರಿಯನ್ನು ಏರ್ಪಡಿಸಲಾಗಿದೆ. ಯಾತ್ರಿಕರ ಅಗತ್ಯಗಳನ್ನು ಆದರ್ಶದ ಸೇವೆಗಳನ್ನು ಪೂರೈಸುವ ಮಾರ್ಗದರ್ಶಕ ವಿವರಗಳನ್ನು ತಿಳಿಹೇಳುವ ಬಗ್ಗೆ ಮಾರ್ಗದರ್ಶಕ ವಿವರಣಕೇಂದ್ರಗಳನ್ನು ಏರ್ಪಡಿಸಲಾಗಿದೆ.

ಯಾತ್ರಿಕ ಭಕ್ತರು ಹೆಚ್ಚು ಪ್ರಯೋಜನ ಪಡೆಯಬೇಕೆಂದೇ ಈ ಒಂದು ಎಲ್ಲ ರೀತಿಯ ವ್ಯವಸ್ಥೆಯ - ಏರ್ಪಾಡಿನ ಜಾಲವನ್ನು ಆಯೋಜಿಸಲಾಗಿದೆ ಎಂಬುದು ಸ್ಪಷ್ಟವೇ ಇದೆ. ಆದರೆ ಇಲ್ಲಿ ಅತ್ಯಂತ ಹೆಚ್ಚಿನ ಸೌಲಭ್ಯದ ಗುರಿಯೂ ಗಮ್ಯವೂ ಆದ ಯಾತ್ರಿಕ ಭಕ್ತರು ಹೃತ್ಪೂರ್ವಕವಾಗಿ ಸಹಕರಿಸಬೇಕಾದ ಅಗತ್ಯವಿದೆ ಎಂಬುದನ್ನು ಪ್ರತ್ಯೇಕವಾಗಿ ಹೇಳಬೇಕಿಲ್ಲ. ಯಾತ್ರಿಕರು ಸರತಿಯ ಸಾಲಿನಲ್ಲಿ - ದರ್ಶನದ ಸಾಲಿನಲ್ಲಿ, ಕೋಣೆಗಳ ಪಡೆಯುವಲ್ಲಿ, ಕಲ್ಯಾಣಕಟ್ಟೆಯಲ್ಲಿ, ಸ್ವಾಮಿ ಪುಷ್ಕರಿಣಿಯ ಸ್ನಾನಘಟ್ಟಗಳಲ್ಲಿ, ಉಚಿತ ಭೋಜನದ ಸಾಲಿನಲ್ಲಿ - ಒಟ್ಟಿನಲ್ಲಿ ಎಲ್ಲ ಕಡೆ ಸಂಯಮವನ್ನು, ಧಾರ್ಮಿಕ ಔದಾರ್ಯವನ್ನು ಮೆರೆಯುವಂತೆಯೇ ವಸ್ತ್ರವಿನ್ಯಾಸ ಗೌರವವನ್ನೂ ಪಾಲಿಸಬೇಕು.

ಆಧುನಿಕತೆ, ಅನುಕೂಲಗಳಿಗೆ ತಕ್ಕಂತೆ ಕಾಲಕ್ರಮದಲ್ಲಿ ಮನುಷ್ಯನು ಬಳಸುವ ವಸ್ತ್ರವಿನ್ಯಾಸವೂ ಬದಲಾಗುತ್ತಿದೆಯೆಂಬುದು ಆಧುನಿಕತೆಯ ಪರ ವಾದವಾಗಿರಬಹುದು. ಒಂದು ಪರಂಪರೆ, ಒಂದು ಗೌರವನೀಯ ಸ್ಥಾಯಿಯಲ್ಲಿ ನಡೆಯುವಿಕೆಯನ್ನು ಯಾರಾದರೂ ಒಪ್ಪಬೇಕು. ಅಂತಲ್ಲಿ ಸ್ವಾಮಿಯನ್ನು - ಸರ್ವೋತ್ತಮನನ್ನು ನೋಡ ಹೊರಡುವಲ್ಲಿ ಪರಂಪರಾಗತವಾದ ವಸ್ತ್ರಧಾರಣೆಯಿದ್ದಲ್ಲಿ ಜೊತೆಯವರಲ್ಲಿಯೂ ಧಾರ್ಮಿಕ ಭಾವನೆಗಳ ಉದ್ದೀಪನೆಗೆ, ಪ್ರೋತ್ಸಾಹಕ್ಕೆ ಬೆಂಬಲವಾಗುವುದೇ ಅಲ್ಲದೆ ಸ್ವಸಂಯಮವನ್ನು, ಆಂತರಂಗಿಕ ಶಿಸ್ತನ್ನೂ ಹೆಚ್ಚುಗೊಳಿಸಲು ಪೂರಕ ಪ್ರೇರಕವಾಗುತ್ತದೆ. ಪರಂಪರಾಗತವಾದ ವಸ್ತ್ರಧಾರಣೆಯಿಂದ ಪರಮಾತ್ಮನ ದರ್ಶನಕ್ಕೆ ಹೊರಟು ಬರುವುದು ಅತ್ಯುತ್ತಮವಾಗಿರುತ್ತದೆ ಎಂಬುದು ಹಿರಿಯರ ಭಕ್ತರ ಭಾವನೆ, ಅಭಿಮತ.

ಯಾತ್ರಿಕ ಭಕ್ತರು ಶಿಸ್ತು ಸಂಯಮಗಳನ್ನು ಪಾಟಿಸುವಂತೆಯೇ ಆಂತರಂಗಿಕ ಸೌಂದರ್ಯವನ್ನೂ ಹೆಚ್ಚಿಸುವ ಧಾರ್ಮಿಕ ಸೌಕರ್ಯವನ್ನು ಹೆಚ್ಚಿಸುವ ಪರಂಪರಾಗತ ವಸ್ತ್ರಧಾರಣೆಯತ್ತ ಗಮನ ಹರಿಸುವರೆಂದು ಆಶಿಸಲಾಗಿದೆ.

ತಮ್ಮ ವಿಶ್ವಾಸಿ,

ಡಾ|| ಪಿ. ಕೃಷ್ಣಯ್ಯ, ಐ.ಎ.ಎಸ್.,
ಕಾರ್ಯನಿರ್ವಹಣಾಧಿಕಾರಿ.
ತಿ.ತಿ.ದೇ.



# ಅನ್ನಮಯ್ಯ - ಶ್ರೀ ವೆಂಕಟೇಶ್ವರಸ್ವಾಮಿ



**ಡಾ ॥ ಕೆ. ಸರ್ವೋತ್ತಮರಾವು**

ಕನ್ನಡದಲ್ಲಿ ನರಹರಿ ತೀರ್ಥರು ಶ್ರೀಪಾದರಾಯರು, ಪುರಂದರದಾಸರು ಕನಕದಾಸರು ಪ್ರಸಿದ್ಧ ಕೀರ್ತನೆಕಾರರು. ಮಹಾರಾಷ್ಟ್ರದಲ್ಲಿ ತುಕಾರಾಂ, ಇನ್ನೂ ಮೇಲೆ ನರಸೀ ಮೆಹತಾ, ಮೀರಾಬಾಯಿ, ಅಂತಹವರು ಪ್ರಸಿದ್ಧ ವಾಗ್ಗೇಯಕಾರರು. ತೆಲುಗಿನಲ್ಲಿ ಅನ್ನಮಾಚಾರ್ಯರ ಕುಟುಂಬ, ಕ್ಷೇತ್ರಯ್ಯ, ತ್ಯಾಗರಾಜರು, ರಾಮದಾಸರು - ಮೊದಲಾದವರು ಕೀರ್ತನಸಾಹಿತ್ಯಧ್ವಜವನ್ನು ಎತ್ತರದಲ್ಲಿ ಹಾರಾಡುವಂತೆ ಮಾಡಿದರು. ಇವರಲ್ಲಿ ಅನ್ನಮಯ್ಯನ ಸ್ಥಾನ ಹದುಳವಾದದ್ದು ಮಾರ್ಗದರ್ಶಕವಾದದ್ದು.

ತೆಲುಗು ಸಾಹಿತ್ಯದಲ್ಲಿ ತಾಳ್ಳಪಾಕ ಕುಟುಂಬ, ಪಿಡುಪರ್ತಿ ಕುಟುಂಬ, ವೆನ್ನೆಲಕಂಟಿ ಕುಟುಂಬ, ಮರಿಗಂಟಿ ಕುಟುಂಬಗಳು ಪ್ರಸಿದ್ಧವಾದವು. ಇವರೆಲ್ಲರೂ ಸಾಹಿತ್ಯ ಸೇವೆಯನ್ನು ಹೆಚ್ಚುಕಾಲ ನಡೆಸಿದವರೇ, ಆದರೆ ಎಲ್ಲದರ ನಡುವೆ ತಾಳ್ಳ ಪಾಕದ ಕುಟುಂಬದ ಹೆಗ್ಗಳಿಕೆ ಅಸಾಮಾನ್ಯ ವಾದದ್ದು. ಸಂಗೀತ ಸಾಹಿತ್ಯವನ್ನು ಸಮಾನವಾಗಿ ಆರಾಧಿಸುವುದು, ಶೈವಸಾಹಿತ್ಯಕ್ಕೆ ಸಮನಾಗಿ ವೈಷ್ಣವಸಾಹಿತ್ಯವನ್ನು ಪ್ರಚಾರಗೊಳಿಸುವುದು, ತಮಗೆ ಮಹಾರಾಜರು ನೀಡಿದ ಗ್ರಾಮಗಳನ್ನೆಲ್ಲ ಸ್ವಾಮಿ ಸೇವೆಯಲ್ಲಿಯೇ ಬಳಸುವುದು ತಿರುಮಲೆಯ ಆಲಯದಲ್ಲಿ ಹಲವು ಹೊಸ ಸೇವೆಗಳನ್ನು ಆರಂಭಿಸುವುದು, ತಮ್ಮ ಎಲ್ಲ ಸಾಹಿತ್ಯವನ್ನು ತಾಮ್ರ ಪತ್ರಗಳಲ್ಲಿ ಕೆತ್ತಿಸಿ ರಕ್ಷಿಸಿರುವುದು ಇವರ ಪ್ರತ್ಯೇಕತೆ.

ತಾಳ್ಳಪಾಕ ವಂಶದ ಶಿರೋಮಣಿ ತಾಳ್ಳಪಾಕ ಅನ್ನಮಾಚಾರ್ಯರು ಕ್ರಿ.ಶ. 1408 ರಿಂದ ಕ್ರಿ.ಶ. 1503 ರ ವರೆಗೆ ಇದ್ದವರು. ಸ್ವಾಮಿಯ ನಂದಕಾಂಶದಿಂದ ಜನಿಸಿದವರು. ದಿನಕ್ಕೆ ಒಂದು ಕೀರ್ತನೆಗೆ ಕಡಿಮೆಯಿಲ್ಲದಂತೆ ತಮ್ಮ ಜೀವನಕಾಲದಲ್ಲಿ 32000 ಕೀರ್ತನೆಗಳನ್ನು ಹಾಡಿದವರು. ಇವುಗಳಲ್ಲದೆ ಹನ್ನೆರಡು ಶತಕಗಳು, ಸಂಕೀರ್ತನ ಲಕ್ಷಣ, ರಾಮಾಯಣ, ವೆಂಕಟಾಚಲ ಮಾಹಾತ್ಮ್ಯಂ, ಶೃಂಗಾರ ಮಂಜರಿ



ಮೊದಲಾದ ರಚನೆಗಳನ್ನು ಮಾಡಿದವರು. ತಾವೇ ಅಲ್ಲದೆ ತಮ್ಮ ಕುಟುಂಬದವರನ್ನೂ ಸಾಹಿತ್ಯ ಸೇವೆಯಲ್ಲಿ - ಸ್ವಾಮಿ ಸೇವೆಯಲ್ಲಿ ವಿನಿಯೋಗಿಸಿದ ಸಂಕಲ್ಪ ಹೃದಯಿ.

ಅನ್ನಮಯ್ಯ ಮೆಚ್ಚಿದ ದೈವ ವೆಂಕಟೇಶ್ವರಸ್ವಾಮಿ. ತಿರುಮಲೆಯಪ್ಪನ ಪ್ರಸಾದವೆಂದು ಹೇಳದಿದ್ದರೆ ಬಾಲ್ಯದಲ್ಲಿ ಏನನ್ನೂ ತಿನ್ನುತ್ತಿರಲಿಲ್ಲವಂತೆ. ವೆಂಕಟಪತಿಯ ಹಾಡುಗಳನ್ನು ಹಾಡುತ್ತಿದ್ದರೆ ಅವುಗಳನ್ನು ಕೇಳುತ್ತ ನಿದ್ದೆ ಹೋಗುತ್ತಿದ್ದನಂತೆ. ಕೆಲಸ ಬೊಗಸೆ ಕೈಬಿಟ್ಟ ಹುಡುಗನನ್ನು, ಅತ್ತಿಗೆ ಕೆಲಸಕ್ಕೆ ಹಾಕಿದರೆ ಹುಲ್ಲು ಹೊರೆಯಲು ಹೋಗುತ್ತಿದ್ದ. ಒಂದು ಬಾರಿ ಹುಲ್ಲು ಕುಯ್ಯುವಾಗ ಕುಡುಗೋಲು ತಾಕಿ ಬೆರಳು ಹರಿದು ರಕ್ತಬಂದಿತು. ಆಗಲೇ ಅನ್ನಮಯ್ಯ ತಿರುಮಲೆಗೆ ಹೋಗುವ ಪರಿಷೆಯಲ್ಲಿ ಸೇರಿಹೋದ. ತಿರುಮಲೆಯಲ್ಲಿ ಘನವಿಷ್ಣು ಅನ್ನಮಯ್ಯನಿಗೆ ವೈಷ್ಣವ ದೀಕ್ಷೆ ನೀಡಿದರು. ಅನ್ನಮಯ್ಯ ಪರಮ ವೈಷ್ಣವನಾದ.

ಅನ್ನಮಯ್ಯ ವೆಂಕಟೇಶ್ವರನನ್ನು ಪರಿಭಾವಿಸಿದ ರೀತಿ ವಿನೂತನವಾದದ್ದು. ವೆಂಕಟೇಶ್ವರಸ್ವಾಮಿ ಶಿವನೆಂದು ಕೆಲವರು, ಜಿನನೆಂದು ಕೆಲವರು, ಶಕ್ತಿಯೆಂದು ಮತ್ತೂ ಕೆಲವರು ಕರೆದರೆ ಕುಮಾರಸ್ವಾಮಿಯೆಂದು ಮತ್ತೂ ಹಲವರು. ಹರಿಹರ ಮೂರ್ತಿಯೆಂದು ಭಾಗವತರು, ಪರಬ್ರಹ್ಮನೆಂದು ಪಂಡಿತರೂ ವಾದೋಪವಾದ ನಡೆಸಿರಲು ಅನ್ನಮಯ್ಯ-

ಎಷ್ಟು ಮಾತ್ರದಲಿ ಯಾರೆ ನೆನೆದರೂ
ಅಷ್ಟು ಮಾತ್ರದವ ನೀನು

- ಎಂದು ಸ್ಪಷ್ಟಪಡಿಸಿದ. ಆತನ ದೃಷ್ಟಿಯಲ್ಲಿ ಶ್ರೀನಿವಾಸನು ಸಾಕ್ಷಾತ್ ವಿಷ್ಣು ಸ್ವರೂಪ. ಹಾಗೆಂತಲೇ ಪುರುಷ ಸೂಕ್ತದಲ್ಲಿ ಬಣ್ಣಿಸಿದ ವಿರಾಟ್ ಸ್ವರೂಪ ತತ್ವವನ್ನು ಅನ್ನಮಯ್ಯ ಹಲವು ಸಂಕೀರ್ತನೆಗಳಲ್ಲಿ ವರ್ಣಿಸಿದ್ದಾನೆ.

ಕಂಗಳ ಸೂರ್ಯನು ಕಮಲಿನಿಗಾಪ್ತನು
ಚಂದಿರ ನಿನ್ನಯ ಮನದಲಿ ಜನಿಸಿದ
ಪುರುಷನು ನೀನೆನೆ ವೇದವು ಹೊಗಳಿದೆ
x x x x x
ಅದೆ ಬ್ರಹ್ಮ ಸಾಕಾರ ವದೆ ಪುರುಷ ಸೂಕ್ತ
x x x x x
ಎಲ್ಲಿಯು ಶ್ರೀವೆಂಕಟೇಶ
ಏಕೋನಾರಾಯಣ





ಜಗವೆಲ್ಲ ತವಮಯವು
ಸರ್ವಂ ವಿಷ್ಣುಮಯ ವಲ್ಲವೆ ?

x x x x x

ಎನಿತೊ ಶಿರಗಳು ಎನಿತೊ ಪದಗಳು
ಎನಿತೆನಿ ತೋ ಸಂಖ್ಯೆಯ ಹಸ್ತಗಳು

x x x x x

ನಿನ್ನ ಬಳಿ ಬ್ರಹ್ಮ ಶಿವ ಇಂದ್ರರು
ನಿನ್ನ ಬಳಿಯೇ ಸರ್ವ ದಿಕ್ ಪಾಲಕರು

x x x x x

ಇತರ ವಾಗ್ಗೇಯಕಾರರಿಗೂ ಅನ್ನಮಯ್ಯನಿಗೂ ಒಂದು ವಿಸ್ಪಷ್ಟ ವ್ಯತ್ಯಾಸವಿದೆ. ಆಳ್ವಾರರಲ್ಲಿ ಒಬ್ಬರಾದ ತೊಂಡರಡಿಪ್ಪೊಡಿಆಳ್ವಾರರು ಶ್ರೀರಂಗನಾಥನ ಹೊರತು ಬೇರೆ ದೇವರನ್ನು ಕೀರ್ತಿಸಲಿಲ್ಲ. ಮಧುರ ಕವಿ ಆಳ್ವಾರರಂತೂ ಗುರುವಿನ ಹೊರತು ಇತರರ ಗೊಡವೆಯೇ ಬೇಡವೆಂದರು. ಕುಲಶೇಖರ ಆಳ್ವಾರರು ರಾಮಕೃಷ್ಣರನ್ನು ಸ್ತುತಿಸಿದರು. ಮೊದಲಾಳ್ವಾರರು - ಮೂವರೂ - ಹರಿಹರ ರೂಪದ ಕೀರ್ತನೆ ಮಾಡಿದರು. ಅನ್ನಮಯ್ಯ ಯಾವ ದೇವತಾ ಮೂರ್ತಿಯನ್ನು ನೋಡಿದರೂ ಆ ಮೂರ್ತಿಯಲ್ಲಿ ಶ್ರೀ ವೆಂಕಟೇಶ್ವರಸ್ವಾಮಿಯನ್ನೇ ನೋಡಿದುದು ಒಂದು ವಿಶೇಷ. ವಿಠಲನನ್ನು ನೋಡಿ - ಈ ಮೂರುತಿಯೇ ಪಾಂಡುರಂಗ ಮಂದಿರನಾಗಿರುವುದು ಎಂದು ಸ್ತುತಿಸಿದರೆ, ನರಸಿಂಹನನ್ನು ಶ್ರೀನಿವಾಸನೆಂದೇ (ವೇಂಕಟ ನರಸಿಂಹ) ಭಾವಿಸಿದ. ರಂಗನಾಥನನ್ನೂ ತಿರುಮಲಪ್ಪನೆಂದು ಸ್ತುತಿಸಿದ.

ಅನ್ನಮಯ್ಯ ಒಬ್ಬ ಮಹಾಕವಿ. ಕವಿಗಿರುವ ಹಲವು ಶಕ್ತಿಗಳಲ್ಲಿ ಭಾವವ್ಯಾಪಾರವೊಂದು. ಆ ಭಾವದಲ್ಲಿ ವಿದ್ವತ್ತು ಇರಬಹುದು. ಲೋಕಜ್ಞತೆ ಸ್ಪಷ್ಟವಾಗಬಹುದು. ಭಕ್ತಿ ಪ್ರವಹಿಸಬಹುದು. ಹಾಗಾಗಿಯೇ ಸ್ವಾಮಿಯನ್ನು ಹಲವು ರೂಪಗಳಲ್ಲಿ ಅನ್ನಮಯ್ಯ ದರ್ಶಿಸಲು ಸಾಧ್ಯವಾಯಿತು.

ಅನ್ನಮಾಚಾರ್ಯ ಕೀರ್ತನೆಗಳಲ್ಲಿ ಒಂದು ಹಂಸ ಸಂಕೀರ್ತನೆ. ಹಂಸವು ಬ್ರಹ್ಮನ ವಾಹನವೆಂದು ಪ್ರಸಿದ್ಧ. ಹಂಸ ಬೆಳ್ಳಗಿರುತ್ತದೆ ಎಂಬುದು ಕವಿಸಮಯ. ಅದು ಜಗಮುಜ್ಞಾನದ ಸಂಕೇತ. ಯೋಗದಲ್ಲಿ ಹಂಸದರ್ಶನವಿದೆ. ಹಂಸ ಪರಮಾತ್ಮ ವಾಚಿಯೂ ಹೌದು.

ಜೀವರ ಮಾನಸ ಸರಸಿಯ
ಲಾಡುತಲಿರುವುದಿದೆ ಹಂಸ
ಹಾಲು ನೀರುಗಳ ಬೇರೆಯಾಗಿಸುತ
ಹಾಲೊಳಗಾಡುವುದಿದೆ ಹಂಸ

ನಿತ್ಯ ಜೀವನದಲ್ಲಿ ಮನುಷ್ಯರಿಗೆ ಅಗತ್ಯವಾದ ಹಲವು ವಸ್ತುಗಳುಂಟು. ಅವುಗಳಲ್ಲಿ ಒಂದು ವಸ್ತ್ರಧಾರಣೆ. ವಸ್ತ್ರವಿರುವುದು ಮಾನಸಂರಕ್ಷಣೆಗೆ. ಆ ವಸ್ತ್ರವನ್ನು ನೇಯುವಾತ ನೇಕಾರ. ಮಾರುವವನು ಬೇಹಾರಿ. ಮಾರಾಟ ಸಂತೆಯಲ್ಲಿ, ಹಾಗಾಗಿ ಅನ್ನಮಯ್ಯ ಸ್ವಾಮಿಯನ್ನು ಬೇಹಾರಿಯನ್ನಾಗಿ ರೂಪಿಸಿ ಹಾಡಿದ.

ಬೀದಿ ಬೀದಿಯಲಿ ಬಂದುಹೋಗುವನು
ನೆರಳಿನಲಿ ಸೀರೆಗಳ ಮಾರುವನೀತ ಬೇಹಾರಿ

ಅನ್ನಮಯ್ಯನಿಗೆ ಚರಾಚರವೆಲ್ಲ ಸಾಕ್ಷಾತ್ ಪರಮಾತ್ಮಸ್ವರೂಪ. ಒಂದು ಕೀರ್ತನೆಯಲ್ಲಿ ಅನ್ನಮಯ್ಯ ಸ್ವಾಮಿಯನ್ನು ಬಸವ ಎತ್ತು ಎಂದು (ಕೋಲೆಬಸವ) ವರ್ಣಿಸಿದ್ದಾನೆ. ಎತ್ತು ಇಲ್ಲದೆ ಬೇಸಾಯ ನಡೆಯದು. ಹಾಗೆಯೇ ಪರಮಾತ್ಮನಿಲ್ಲದೆ - ಪರಮಾತ್ಮ ಚಿಂತನೆಯಿಲ್ಲದೆ - ಯಾವುದೂ ನಡೆಯದು. ತ್ರಿಪುರಗಳನ್ನು ಸಾಧಿಸಿದ ಎತ್ತು ಎಂತಲೂ, ನೇಗಿಲಿಗೆ ಕಟ್ಟುಬಿದ್ದ ಎತ್ತು ಎಂತಲೂ, ನಾಲ್ಕು ಯುಗಗಳಲ್ಲಿ ಧರ್ಮದೇವತೆಯಾದ ಎತ್ತು ಎಂತಲೂ, ಹಸುವಿನಂತಹ ಭೂಮಿಯ ಸಂಸರ್ಗದಲ್ಲಿ ಬಲಿತಂತಹ ವೃಷಭಾಚಲದೆತ್ತು ಎಂತಲೂ, ಬಣ್ಣಿಸಲು ಅನ್ನಮಯ್ಯನಿಗೆ ಮಾತ್ರ ಸಾಧ್ಯ. ಹಾಗೆಯೇ ರೈತ ಪ್ರಧಾನವಾದ ಬೆಳೆಯ ಹೊಲವಾಗಿಯೂ ಸ್ವಾಮಿಯನ್ನು ಅನ್ನಮಯ್ಯ ಕಂಡಿದ್ದಾನೆ.

ಬೆಟ್ಟಗಳ ಹೊತ್ತ ದೊಡ್ಡ ಗೊಬ್ಬರದ ಹೊಲವಾಗಿಯೂ, (ಗೋವರ್ಧನೋದ್ಧರಣ) ಕುದುರೆಯ ಬಾಲದ ನಲವಿನ ಹೊಲವೆನ್ನುವಲ್ಲಿ ಕಲ್ಕಿ ಅವತಾರವೂ, ಸ್ವಾಮಿಯು ತುರಗವಾಹನ ಎಂಬ ವೈನವೂ - ವಿಲಾಸವೂ ಕಂಡುಬರುತ್ತವೆ.

ನಿತ್ಯ ಜೀವನದಲ್ಲಿ ಮನುಷ್ಯನಿಗೆ ಅಗತ್ಯವಾದವುಗಳಲ್ಲಿ ವೈದ್ಯವೂ ಒಂದು. ಆರೋಗ್ಯ ಪರಿರಕ್ಷಣೆಯಲ್ಲಿ ವೈದ್ಯ, ಔಷಧ, ಪಥ್ಯ ಸಲಹೆಗಳು ಬಹುಮುಖ್ಯ. ಆರೋಗ್ಯ ಭೌತಿಕ ಶರೀರಕ್ಕೆ ಮಾತ್ರವಲ್ಲ ಆಧ್ಯಾತ್ಮಿಕ ಔನ್ನತ್ಯಕ್ಕೂ ಅಗತ್ಯವೇ. ಅನ್ನಮಯ್ಯ ನಿರೂಪಿಸಿದ ಔಷಧ ಸರ್ವರೋಗ ಸಂಜೀವಿನಿ. ಶ್ರೀ ವೆಂಕಟಾದ್ರಿಯ ಮೇಲಿನ ಮದ್ದು ಗುರುವಿನಿಂದ ದತ್ತ ವಾಗುವಂತಹದು. ವೇದಗಳ ತಿಳಿದವರು ಹುಡುಕುವುದು. ಅದ್ಯಂತ ವಿರಹಿತವಾದದ್ದು. ಜನನ ಜರಮರಣಗಳಿಲ್ಲದಂತೆ ಮಾಡುವುದು. ಅನ್ನಮಯ್ಯನ ದೃಷ್ಟಿಯಲ್ಲಿ ಶ್ರೀ ಹರಿನಾಮ ಸಂಕೀರ್ತನ, ಶ್ರೀಪಾದ ತೀರ್ಥ ಸರ್ವರೋಗ ನಿವಾರಿಣಿಗಳು. ಈ ಮಾತನ್ನೇ ಅನ್ನಮಯ್ಯ-

ಶ್ರೀಪಾದ ತೀರ್ಥವೇ ಕೆಡಲಾಗದ ಔಷಧ - ಎಂದು ಹೇಳಿದ್ದು. ಪೊಡವಿಯನು ಧರಿಸಿದವನು ನಮಗೆ ಭವರೋಗ ವೈದ್ಯ ಎಂಬುದು ಆತನ ನಂಬಿಕೆ. ಧ್ರುವ, ಪ್ರಹ್ಲಾದ, ನಾರದಾದಿಗಳು ಸೇವಿಸಿದ ಔಷಧ, ಸರ್ವ ಸಂಪದ ನೀಡುವ ಔಷಧ. ಬಂಧಗಳ ಬಿಡಿಸುವ ಔಷಧ. ದುಃಖಗಳ ತೊಲಗಿಸುವ ಔಷಧ - ಎಂದೆಲ್ಲ ವಿವರಿಸಿರುವುದು ಲೌಕಿಕ ವ್ಯಾಪಾರ ಲಕ್ಷಣಗಳೂ ಹೌದು.

ಅಲೆಮಾರಿಯಾಗಿ ಬದುಕುತ್ತಿದ್ದವರು - ಆಹಾರ ಸಂಗ್ರಹಣೆಯಲ್ಲಿ ತಿರುಗುತ್ತಿದ್ದವರು ಬೇಸಾಯವನ್ನು ಅಳವಡಿಸಿಕೊಂಡು, ಆಹಾರದ ಉತ್ಪಾದನೆಯಲ್ಲಿ ತೊಡಗಿ, ಸ್ಥಿರವಾಗಿ ನೆಲೆನಿಂತ ಮೇಲೆ ಉಂಟಾದ ಹಲವು ಸಾಮಾಜಿಕ ಸಂಸ್ಥೆಗಳಲ್ಲಿ ಚಾತುರ್ವರ್ಣ ವ್ಯವಸ್ಥೆ ಒಂದು. ಆದರೆ ಭಕ್ತಿ ಸಾಮ್ರಾಜ್ಯದಲ್ಲಿ ವರ್ಣ ವ್ಯವಸ್ಥೆಯಿಲ್ಲ. ಪರಮಾತ್ಮನ ಅನುಗ್ರಹ ಪಡೆದವರೆಲ್ಲ ಆರಾಧ್ಯರೇ. ವಾಗ್ಗೇಯಕಾರರೆಲ್ಲ ಈ ವ್ಯವಸ್ಥೆಯನ್ನು - ಭಕ್ತಿಯನ್ನು - ನಂಬಿದರು. ಆದರಿಸಿ ಪ್ರಚಾರ ಮಾಡಿದರು. ಹಾಗಾಗಿ ಅನ್ನಮಯ್ಯ ಸ್ವಾಮಿಯನ್ನು ಬ್ರಾಹ್ಮಣನಾಗಿಯೂ, ಬೋಯಿ ಆಗಿಯೂ ಕಂಡು ಕೀರ್ತಿಸಿದ-

ನರಗಳ ಜನಿವಾರ ಹಾಕಿದ ಬ್ರಾಹ್ಮಣನಂತೆ - ಎಂದರೆ ನರಸಿಂಹಾವತಾರ. ಸುಂದರ ನವಿಲು ಗರಿಯನ್ನು ತಲೆಗೆ ಸಿಕ್ಕಿಸಿದವನು - ಎಂದರೆ ಕೃಷ್ಣಾವತಾರ. ಚಿಕ್ಕ ಗುಂಡು ತಲೆಯೊಡನೆ ಬ್ರಹ್ಮಚಾರಿಯಾಗಿ ಲಂಗೋಟಿ ಕಟ್ಟಿದವನಂತೆ ಎಂಬಲ್ಲಿ ವಾಮನಾವತಾರ. ಹಳದಿಯ ಧೋತಿಯ ಬ್ರಾಹ್ಮಣನಂತೆ ಎಂಬಲ್ಲಿ ಪೀತಾಂಬರಧಾರಿ ಶ್ರೀ ವೆಂಕಟೇಶ್ವರಸ್ವಾಮಿ ಎಂಬ ಭಾವ.

ಕಳ್ಳತನ ಅರವತ್ನಾಲ್ಕು ಕಲೆಗಳಲ್ಲಿ ಒಂದು. ಇದು ಪಾಪವೂ ಹೌದು. ಆದರೆ ಆಧ್ಯಾತ್ಮಿಕ ಜಗತ್ತಿನಲ್ಲಿ ಅನ್ನಮಯ್ಯ ವರ್ಣಿಸುವ ಕಳವು ಪಾಪವಾಗಿಲ್ಲ. ಜೊತೆಗೇ ಪುಣ್ಯಪ್ರದವೂ ಹೌದು. ಎಂತಲೇ ಅನ್ನಮಯ್ಯ ಸ್ವಾಮಿಯನ್ನು ಕಳ್ಳನೆಂದು ಅಭಿವರ್ಣಿಸಿದ. ಸೋಮಕಾಸುರನು ವೇದಗಳನ್ನು ಅಪಹರಿಸಿದ. ಅಪಹರಣಕಾರರನ್ನು ಹಿಡಿಯಲು ಮೀನಿನ ವೇಷ ಹಾಕಿದರೆ ತಪ್ಪು ಆಗದು. ಬಲಿಚಕ್ರವರ್ತಿಯ ಬಳಿಗೆ ಬಡವನಾಗಿ ಬೇಡಲು ಹೋಗುವುದು - ವೇಷಾಂತರ ರೂಪದ ಚೌರ್ಯ. ಭಸ್ಮಾಸುರನನ್ನು ತುಳಿಯಲು ಸ್ವಾಮಿ ಮೋಹಿನೀ ಅವತಾರ ತಳೆಯುವುದೂ ಲೋಕಕ್ಷೇಮಕ್ಕೆಂದೇ. ಕೃಷ್ಣಾವತಾರದಲ್ಲಿ ಯಾದರೊ ಸ್ವಯಂ ಕಳ್ಳನಾಗಿ ಲೀಲಾವಿನೋದಿಯಾದ. ಜೀವರನ್ನು ಆಟವಾಡಿಸುವುದು ಭಗವಂತನ ಚೌರ್ಯ.

ಹಾಗೆಯೇ ಸ್ವಾಮಿಯನ್ನು ಭೂತವೆಂದೂ ವರ್ಣಿಸಿದ್ದಾನೆ. ಈ ಭೂತ ಭವಭಯವನ್ನು ವಿನಾಶ ಮಾಡುವುದು. ಹೀಗೆಂದು ಅನ್ನಮಯ್ಯ ಸ್ವಾಮಿಯನ್ನು, ಪೂರ್ವಕೃತ್ಯಗಳನ್ನು ವರ್ಣಿಸಿದ್ದಾನೆ. ಹಡಗ ನುಂಗಿದ ಭೂತ ಮತ್ಸ್ಯಾವತಾರ. ದೊಡ್ಡ ಬೆನ್ನಿನ ದೊಡ್ಡ ಭೂತದಲ್ಲಿ ಕೂರ್ಮಾವತಾರ. ಕನಲಿದ ಕಲಿಯಂತಹ ಭೂತದಲ್ಲಿ ವರಾಹಾವತಾರ ಎಂದು ವರ್ಣಿಸುತ್ತ ಕಡೆಗೆ ವೆಂಕಟಗಿರಿಯ ಮೇಲಿನ ಭೂತವೆಂದು ವರ್ಣಿಸಿದ್ದಾನೆ. ವೆಂಕಟಾದ್ರಿಯ ಮೇಲೆ ನೆಲೆಸಿ ಲೋಕಗಳನ್ನೆಲ್ಲ ನಿಲ್ಲಿಸಿದ ಶಿಶುವೆಂದು ಈ ಮಗುವನ್ನು, ಸ್ವಾಮಿಯನ್ನು ವರ್ಣಿಸಿದ್ದಾನೆ.

ಶ್ರೀ ವೆಂಕಟೇಶ್ವರಸ್ವಾಮಿ ಕಲಿಯುಗ ಪ್ರತ್ಯಕ್ಷ ದೈವ. ಆತ ಆದಿದೈವ. ಈ ಆದಿದೇವನನ್ನು ಕೀರ್ತಿಸುವಾಗ ವೇದಶಾಸ್ತ್ರ ಪುರಾಣಾದಿ ಕಾವ್ಯಗಳಲ್ಲಿನ ಭಕ್ತರನ್ನು ವರ್ಣಿಸುವುದು ಆಚಾರ. ಅನ್ನಮಯ್ಯ ಇವುಗಳನ್ನು ತ್ಯಜಿಸಲಿಲ್ಲ.

ಎಲ್ಲ ಮಂತ್ರಗಳೂ ಇಲ್ಲಿ ಆವಾಹಿಸುವುವು ಎಂಬ ಕೀರ್ತನೆಯಲ್ಲಿ ನಾರಸಿಂಹ ರಾಮ ವಾಸುದೇವ ಕೃಷ್ಣ ವಿಷ್ಣು ಮಂತ್ರಗಳನ್ನು, ಆ ಮಂತ್ರಗಳನ್ನು ಜಪಿಸಿದ ಕಲಿಯುಗದ ಭಕ್ತರನ್ನೂ ಮರೆಯಲಿಲ್ಲ. ಪುಷ್ಪಕೈಂಕರ್ಯ ಸಲ್ಲಿಸಿದ ಅನಂತಾಳ್ವಾನ್, ತೋಯಕೈಂಕರ್ಯ ಸಲ್ಲಿಸಿದ ತಿರುಮಲನಂಬಿ, ಕುಂಭಕಾರ ಕುರುವರತಿ ನಂಬಿ, ತೊಂಡಮಾನ್ ಚಕ್ರವರ್ತಿಗಳನ್ನು ಸ್ತುತಿಸಿದ್ದಾನೆ.

ಅನ್ನಮಯ್ಯ 108 ದಿವ್ಯ ತಿರುಪತಿಗಳನ್ನು ದರ್ಶಿಸಿದನೋ ಇಲ್ಲವೋ ತಿಳಿಯದಾದರೂ ಶ್ರೀ ವೆಂಕಟೇಶ್ವರನನ್ನು ಸಂಬೋಧಿಸುವ ರೀತಿಯಲ್ಲಿಯೇ ಒಂದು ವಿಚಿತ್ರವಿದೆ. ದಿವ್ಯ ದೇಶಗಳಲ್ಲಿನ ಮುಖ್ಯ ದೇವತೆಗಳ ಹೆಸರುಗಳು ಅನ್ನಮಾಚಾರ್ಯ ಕೀರ್ತನೆಗಳಲ್ಲಿ ಕಂಡು







ಬರುವುದೇ ಆ ವಿಶೇಷ. ಈ ತಿರುಪತಿಗಳೆಲ್ಲ ಒಂದೇ ಎನ್ನಲು ಮಾಡಿದ ಪ್ರಯತ್ನವೆನ್ನಬೇಕು. ಉದಾಹರಣೆಗೆ ಆದಿ ಮೂಲವೂ ಎಂಬ ಕೀರ್ತನೆ.

ಪಾರ್ಥಸಾರಥಿ - ಚೆನ್ನೈನಲ್ಲಿನ ತಿರುವಳ್ಳಿಕೇಣಿ (ಟ್ರಿಪ್ಲಿಕೇನ್) ಯಲ್ಲಿನ ದೇವರು.

ವರದರಾಜ - ಚೆಂಗಲ್ಪಟ್ಟು ಜಿಲ್ಲೆಯ ಕಂಚಿ ಸ್ವಾಮಿಯ ಹೆಸರು.

ತಿಲ್ಲೈ ಗೋವಿಂದರಾಜ - ಚಿದಂಬರದ ಸ್ವಾಮಿಯ ಹೆಸರು.

ಆದಿವರಾಹ - ಕಂಚಿಯ ಬಳಿಯ ಕಾಲ್ವನೂರ್ ಸ್ವಾಮಿಯ ಹೆಸರು.

ಗೋವಿಂದರಾಜ - ತಿರುಚಿತ್ರಕೂಟದ ಸ್ವಾಮಿ.

ವಾವಿಲಿಪಾಟಿ ರಾಮ - ತಿರುಪುಲ್ಲಾಣಿಯ ಸ್ವಾಮಿಯ ಹೆಸರು.

ಈ ಹೆಸರುಗಳನ್ನು ಸಾಮಾನ್ಯ ಸಂಬೋಧನೆಗಳೆಂದೂ ಹಲವರು ಪರಿಗಣಿಸುವರು. ಅನೇಕ ವಿಧದಲ್ಲಿ ಸ್ವಾಮಿಯ ಹೋಲಿಕೆಗಳನ್ನು ಅನ್ನಮಯ್ಯ ತಂದಿದ್ದಾನೆ. ದೇವರ ಅಂಗಾಂಗಗಳನ್ನು ಹೆಸರಿಸಿರುವುದೊಂದು ಸೊಬಗು.

ತಾವರೆ ಹೂವ ಹೋಲುವ ಪಾದಗಳಾತ.
ಚಿಂತಾ ಜಲಧಿಯೊಳು ಸಿಕ್ಕವರ ದಾಟಿಸಲು
ನಿನ್ನ ಪಾದಗಳೇ ತೆಪ್ಪ
X X X X X
ಕಾಂತೆಯರ ಮೋಹದ ಕಟ್ಟೆಯ
ನೊಡೆಯಲು
ನಿನ್ನ ಪಾದಗಳೆ ದೃಢವಾದ ಕೊಡಲಿ
X X X X X
ನಿನ್ನ ಪಾದಗಳೆ ವರ್ಷದೊಲು ಸುರಿವುದು
X X X X X
ಅಜ್ಞಾನದ ತಮವನ್ನೋಡಿಸಲು ಸಮರ್ಥವು
ನಿನ್ನ ಪಾದದ ಉದಯ ರವಿಯ

-ಎನ್ನುವಲ್ಲಿ ಕಮಲ, ತೆಪ್ಪ, ಕೊಡಲಿ, ಉದಯರವಿ, ಮೊದಲಾದವುಗಳ ಪ್ರತ್ಯೇಕತೆ ಮುಖ್ಯವಾಗುತ್ತದೆ.

ಭಕ್ತಿ ವೈವಿಧ್ಯದಲ್ಲಿ ಮಧುರ ಭಕ್ತಿಯೂ ಒಂದು. ದೇವ ಪತಿ ಭಕ್ತಸತಿ ಭಾವ ಈ ಮಧುರ ಭಕ್ತಿಯ ಒಂದಂಗ. ಈ ತತ್ವವನ್ನು ವೈಷ್ಣವರು ತುಂಬ ಪ್ರಚಾರ ಮಾಡಿದರು. ಪರಾಂಕುಶ ನಾಯಕಿ ಎಂದು ನಮ್ಮಾಳ್ವಾರರನ್ನು ಕೀರ್ತಿಸುವುದಿದೆ. ಈ ಭಾವನೆಯಿಂದ ಅನ್ನಮಯ್ಯ ತನ್ನ ಭಕ್ತಿ ವಿರಹವನ್ನು ಬಹು ವಿಧದಲ್ಲಿ ವರ್ಣಿಸಿ ಕೃತಕೃತ್ಯನಾಗಿದ್ದಾನೆ. ಈ ಭಾವನೆ ಶೃಂಗಾರ ಸಂಕೀರ್ತನೆಗಳ ಭಾವಸಾರ. ಹರಿದಾಸರ ಕೀರ್ತನೆಗಳಲ್ಲಿ ಗೋಪಿಕಾ ಭಕ್ತಿ ಪ್ರಧಾನವಾದದ್ದು.

ಅನ್ನಮಯ್ಯನಿಗೂ ತಿರುಮಲೆಗೂ ಪ್ರಗಾಢ ಅನುಬಂಧವಿದೆ. ಸ್ವಾಮಿಯ ಎಲ್ಲ ಕೈಂಕರ್ಯವನ್ನೂ ಸಂದರ್ಶಿಸಿದವನು ಅನ್ನಮಯ್ಯ. ತಾನು ಕಂಡ ವಿವಿಧ ಸೇವೆಗಳನ್ನು ಅನನ್ಯವಾಗಿರುವ ಅಸಾಮಾನ್ಯವಾದ ಕೀರ್ತನೆಗಳಲ್ಲಿ ಪ್ರಕಟಿಸಿರುವುದೊಂದು ವಿಶೇಷ. ಇತರ ಯಾವ ವಾಗ್ಗೇಯಕಾರರೂ ಇಷ್ಟೊಂದು ಉತ್ಸವಗಳನ್ನು ಕೀರ್ತಿಸಿಲ್ಲ. ರುಚಿಗೆ ಹಲವು - ಹೀಗೆ -

ಸುಮ್ಮನೆ ವೇಷಗಳ ತೊರೆದು ಮೇಲೇಳಬೇಕಯ್ಯ - ಸುಪ್ರಭಾತ.

ಕಂಡೆನಾ ಶುಕ್ರವಾರದ ಏಳು ಗಳಿಗೆಯಲ್ಲಿ - ಅಭಿಷೇಕ.

ಮದುಮಗಳಿಗೆ ಹಿಡಿಯಲ್ಲಿ ಜೀರಿಗೆ ಯಕ್ಕಿ - ಕಲ್ಯಾಣೋತ್ಸವ.

ಚಂಚಲವಾದ ಆತ್ಮಗಳಲ್ಲಿ ಅರಳುತ್ತಲಿರಲು - ಊಂಜಲ್‌ಸೇವೆ.

ಸರುವ ಲೋಕೇಶ್ವರನು ಸರದ ಬೀದಿಯಲಿ - ಪುಷ್ಪಯಾಗ.

ಅಕ್ಕಂದಿರೆಲ್ಲ ನೋಡ ಬನಿರೇ - ಉಟ್ಲ ಉತ್ಸವ.

- ಮೊದಲಾದವುಗಳು. ಮೇಲೆ ಕಿರೀಟವಿಟ್ಟಂತೆ ಅನ್ನಮಯ್ಯ ಬ್ರಹ್ಮೋತ್ಸವವನ್ನು ವರ್ಣಿಸುತ್ತ "ತಿರುಬೀದಿಲಿ ಮೆರೆದನೋ ದೇವದೇವನು" ಎಂಬುದನ್ನು ಹಾಡಿರುವುದು ಬಹುಕಾಲ ನೆನಪಿನಲ್ಲಿ ನಿಲ್ಲುವ ಗೀತೆಯಾಗಿದೆ.

ಅನ್ನಮಯ್ಯ ಸಗುಣ ಭಕ್ತಿಯನ್ನು ಕೈಹಿಡಿದಂತೆ ಕಂಡು ಬಂದರೂ ಆತ ಉಪಾಸನೆ ಮಾಡಿದ್ದು ಪರಬ್ರಹ್ಮವನ್ನು. ಈ ವಿಷಯವನ್ನು ಆತ ಹಲವು ಕಡೆ ಸ್ಪಷ್ಟಪಡಿಸಿದ್ದಾನೆ.

ಬ್ರಹ್ಮವೊಂದಿದೆ, ಪರಬ್ರಹ್ಮವೊಂದೇ ಇದೆ.
ಆತ ಪರಬೊಮ್ಮ ನಾತನೆ ಲೋಕ ನಾಯಕನು
ಸಾಲದೇ ಬ್ರಹ್ಮವಿದು ಸಂಕೀರ್ತನೆ.
ಪರತತ್ವವಾದ ಬಾಲಕನಿವನು

- ವೆಂಕಟೇಶ್ವರಸ್ವಾಮಿ ಅನ್ನಮಯ್ಯನ ಕುಲದೈವ, ಕಾಲ ಮೇಘ, ಪಾರಿಜಾತ, ಚಿಂತಾಮಣಿ, ಕಾಮಧೇನು, ಸಿದ್ಧಮಂತ್ರ, ದಿವ್ಯೌಷಧ, ಎಲ್ಲಕ್ಕೂ ಮೀರಿ ಪ್ರಾಣಬಂಧು.

★★★★★

# ತಿರುಮಲೆಯ ಆಲಯ ಮೂರ್ತಿಗಳು

*ಎಸ್. ವಿ. ಹೇಮಾವತಿ.*

ಕೃತೇತು ನರಸಿಂಹೋಽಭೂತ್,
ತ್ರೇತಾಯಾಂ ರಘುನಂದನಃ
ದ್ವಾಪರೇ ವಾಸುದೇವಶ್ಚ
ಕಲೌ ವೇಂಕಟನಾಯಕಃ

ಕಲಿಯುಗದಲ್ಲಿ ವೆಂಕಟೇಶ್ವರಸ್ವಾಮಿಯ ರೂಪದಲ್ಲಿ ಸರ್ವೇಶ್ವರನನ್ನು ಪೂಜಿಸಲಾಗುತ್ತಿದೆ ಎಂಬುದು ಇಲ್ಲಿನ ಭಾವದ ಅವಧಾರಣೆ. ವೆಂಕಟೇಶ್ವರಸ್ವಾಮಿ ವೆಂಕಟಾಚಲದಲ್ಲಿ ನಿಂತಿರುವುದು ಸರ್ವಪ್ರಸಿದ್ಧ. ಆಳ್ವಾರರ ಕಾಲಕ್ಕೆ ದೂರದಿಂದಲೇ ಈ ಸ್ವಾಮಿಯನ್ನು ನೋಡಬಹುದಾಗಿತ್ತು. ಎಂದರೆ ಅಲ್ಲಿ ಇಂದು ಕಂಡುಬರುವಂತೆ ಗರ್ಭಗುಡಿಯಾಗಲೀ, ವಿಮಾನವಾಗಲೀ ಇರಲಿಲ್ಲವೆಂಬುದು ಪದಾರ್ಥವಾದರೂ ಎಲ್ಲಿ ನಿಂತರೂ ನೋಡಬಹುದು ಕಾಣುವ ಮನಸ್ಸಿದ್ದಲ್ಲಿ ಎಂಬ ಧ್ವನ್ಯರ್ಥವೂ ಆಗುತ್ತದೆ. ತೊಂಡಮಾನನ ಕಾಲದಲ್ಲಿಯೇ ಇಲ್ಲೊಂದು ಆಲಯ ನಿರ್ಮಾಣವಾಯಿತೆಂಬುದು ಪುರಾಣ ಪ್ರಸಿದ್ಧವಾಗಿದೆ. ದೂರದಲ್ಲೊಂದು ಮಂಟಪದಲ್ಲಿ ನಿಂತಿದ್ದಾನೆ ಎಂಬುದು ಆಳ್ವಾರರ ಮಾತು. ಬಾಗಿಲ ಹೊಸ್ತಿಲ ಮೆಟ್ಟಿಲಾಗಿ ನಿನ್ನ ಮುಖವನ್ನು ಸದಾ ನೋಡುತ್ತಿರುವ ಆಸೆ ಎನ್ನುವ ಕುಲಶೇಖರ ಆಳ್ವಾರರ ಮಾತಿನಿಂದ ಇಲ್ಲೊಂದು ಗರ್ಭಗುಡಿ ಇದೆ ಎಂಬುದು ಧ್ವನಿತವಾಗುತ್ತದೆ. ನಂತರದ ಇತಿಹಾಸದ ಕಾಲದಲ್ಲಿ ಆಲಯದ ಕಟ್ಟಡ ನಿರ್ಮಾಣಗಳು, ಗೋಪುರದ ಕಲಶ ಸ್ಥಾಪನೆ ಬಂಗಾರದ ಮುಲಾಮೀಕರಣ ಮೊದಲಾದುವೆಲ್ಲಾ ಶಾಸನೋಕ್ತವಾಗಿ ದಾಖಲೆಗಳಾಗಿವೆ. ಹಾಗಾಗಿ ಎಲ್ಲಕಡೆ ಇರುವ ಸ್ವಾಮಿಗೆ ಗರ್ಭಗುಡಿ ಎಂಬ ಒಂದು ಆವರಣವನ್ನು ಕಲ್ಪಿಸಿರುವುದು ಸ್ಪಷ್ಟವಾಗಿದೆ. ಈ ಗರ್ಭಗುಡಿಯ ಆವರಣದಲ್ಲಿ ವೆಂಕಟೇಶ್ವರಸ್ವಾಮಿ ಅಲ್ಲದೆ ಸೀತಾರಾಮಲಕ್ಷ್ಮಣ ಆಂಜನೇಯ ಕೃಷ್ಣರುಕ್ಮಿಣಿ ಮೊದಲಾದ ಸ್ವಾಮಿಯ ಬೇರೆ ಅವತಾರ ವಿಗ್ರಹಗಳೂ ಉಂಟು - ಎಂಬುದನ್ನು ಹಿಂದೆ ನೋಡಲಾಗಿದೆ. ಜೊತೆಗೆ ಇಲ್ಲಿ ಇತರ ನಾಲ್ಕು ವೆಂಕಟೇಶ್ವರ ಸ್ವಾಮಿಯ ವಿಗ್ರಹಗಳೂ ಇವೆ ಎಂದರೆ ಒಟ್ಟು ಐದು ಮೂರ್ತಿಗಳ - ಪಂಚಬೇರ ಗರ್ಭಗುಡಿಯಿದು. ವೈಖಾನಸ ಆಗಮ ಶಾಸ್ತ್ರದಂತೆ ಏಕಬೇರ ಮೂರ್ತಿ ಆಲಯದಲ್ಲಿ ಪಂಚಬೇರಗಳಿರುವುದು ಸಹಜ. ಅವುಗಳೆಂದರೆ ಕೌತುಕ, ಸ್ನಪನ, ಉತ್ಸವ ಬಲಿಮೂರ್ತಿಗಳು-ಧ್ರುವಬೇರದೊಂದಿಗೆ ಇರಬೇಕು. ವೆಂಕಟೇಶ್ವರಸ್ವಾಮಿ ಆಲಯದಲ್ಲಿ ಕೌತುಕ ಸ್ನಪನಬೇರಗಳು ಒಂದಾಗಿ ಬಲಿಬೇರವು ಓಲಗ ಮೂರ್ತಿಯಾಗಿ ಉತ್ಸವ ಬೇರವು



ಮಲಯಪ್ಪ, ಉಗ್ರ ಶ್ರೀನಿವಾಸರಾಗಿ ಒಟ್ಟು ಐದು ಆಗಿದೆ.

**ಮೂಲದೇವರು :** ಶ್ರೀ ವೆಂಕಟೇಶ್ವರಸ್ವಾಮಿ ಸ್ವಯಂಭು ಆಗಿ ಇಲ್ಲಿ ನೆಲೆಸಿರುವುದು ಪುರಾಣ ಪ್ರಸಿದ್ಧವಾಗಿದೆ. ಕಪ್ಪು ಬಣ್ಣದ ಸುಮಾರು 10 ಅಡಿ ಎತ್ತರದ ನಿಂತ ನಿಲುವಿನ ಭಂಗಿಯ ನಾಲ್ಕು ಕೈಗಳ ಮುಗುಳ್ನಗೆಯ ಮುಖದ ಪುರಾಣಪುರುಷ ಈತ. ಹಣೆಯಲ್ಲಿ ಕಸ್ತೂರಿ ತಿಲಕವೂ ಪಚ್ಚಕರ್ಪೂರದ ಬಿಳಿನಾಮವೂ ಉಂಟು. ಮೇಲಿನ ಎರಡು ಕೈಗಳಿಗೆ ಶಂಖ ಚಕ್ರಗಳನ್ನು ರಾಮಾನುಜರು ತೊಡಿಸಿದರೆಂದು ಹೇಳಲಾಗಿದೆ. ಪುರಾಣಗಳ ಹೇಳಿಕೆಯಂತೆ ಚಕ್ರವರ್ತಿಗೆ ಯುದ್ಧದಲ್ಲಿ ನೆರವೀಯಲೆಂದು ಶಂಖ ಚಕ್ರಗಳನ್ನು ನೀಡಿದ ಶ್ರೀನಿವಾಸನು ಮೇಲಿನ ಎರಡೂ ಕೈಗಳನ್ನು ಬರಿದು ಮಾಡಿಕೊಂಡು ನಿಂತ. ಬರಿಗೈಗಳನ್ನು ರಾಮಾನುಜರು ಶಂಖ ಚಕ್ರಗಳಿಂದ ತುಂಬಿಸಿದರು. ಎಡಕೆಳಗೈ ಕಟಿಹಸ್ತವಾಗಿಯೂ ಬಲದ ಕೆಳಗೈ ವರದ ಹಸ್ತವಾಗಿಯೂ ಕಂಡುಬರುವುದು. ಎದೆಯಲ್ಲಿ ಶ್ರೀವತ್ಸ ಚಿಹ್ನೆಯೂ ಪದ್ಮಾವತಿ ದೇವಿಯೂ ಉಂಟು. ಹಾಗಾಗಿ ಶುಕ್ರವಾರಾಭಿಷೇಕವೆಂದೇ ಪ್ರಸಿದ್ಧಿ ಆಲಯದಲ್ಲಿ ನಡೆಯುವ ಎಲ್ಲ ಪೂಜೆಗಳೂ ಈ ಮೂರ್ತಿಗೇ ಹೌದು. ಈ ಮೂರ್ತಿಯನ್ನು ಆಳ್ವಾರರ ಆದಿಯಾಗಿ ಎಲ್ಲ ಹರಿದಾಸರೂ ಹಾಡಿಹೊಗಳಿದ್ದಾರೆ. ಸಾಕ್ಷಾತ್ ಮನ್ಮಥ - ಮನ್ಮಥ ಎಂಬುದು ಸುಪ್ರಭಾತದಲ್ಲಿ ಬರುವ ಮಾತು. ಮನ್ಮಥನ ತಂದೆಯೇ ಆಗಿರುವಾಗ ಇನ್ನು ಹೇಗೆ ತಾನೇ ಇರಲು ಸಾಧ್ಯ. ಇವನನ್ನು ನೋಡಲೆಂದೇ ದೂರದ ಊರುಗಳಿಂದ ಜನ ಬರುವುದು. ಎಲ್ಲ ಊರಿನಲ್ಲೂ ವೆಂಕಟೇಶ್ವರಸ್ವಾಮಿ ಇದ್ದರೂ ತಿರುಮಲೆಗೆ ಬರಲು ತವಕದಿಂದ ಸಿದ್ಧತೆಯನ್ನು ನಡೆಸಿಕೊಂಡು ಬರುವುದು, ಸ್ವಾಮಿಯ ದರ್ಶನದ ಕನಸು ಕಾಣುವುದು- ಎಲ್ಲ ಈ ದೇವರಿಗಾಗಿಯೇ. ಆಳ್ವಾರರು ಹೇಳುವಂತೆ ಈ ದೇವರ ದರ್ಶನದ, ಅವಕಾಶ, ಸೇವಾ ಅವಕಾಶ ದೊರೆತಲ್ಲಿ ಮೋಕ್ಷವನ್ನೂ ತೃಣೀಕರಿಸಬಹುದು.

ತಿರುಮಲೆಗೆ ಬಂದು ಆಲಯವನ್ನು ಒಳಹೊಕ್ಕಾಗ ಬಂಗಾರದ ಬಾಗಿಲಿನಿಂದ ದೂರಕ್ಕೂ ಎದ್ದು ಕಾಣುವ ವಿಗ್ರಹ ಶ್ರೀ ವೆಂಕಟೇಶ್ವರಸ್ವಾಮಿಯದು. ಸೂಜಿಗಲ್ಲಿನತ್ತ





ಆಕರ್ಷಿತವಾಗುವ ಕಬ್ಬಿಣದ ಧೂಳಿನಂತೆ ಜನ ಸ್ವಾಮಿಯನ್ನು ಹತ್ತಿರದಿಂದ ನೋಡಲು ಎಷ್ಟು ದೂರದಿಂದಲಾದರೂ ಬರುತ್ತಾರೆ. ಈ ಸ್ವಾಮಿಯನ್ನು ಎಷ್ಟು ಕಣ್ತುಂಬಿಸಿಕೊಂಡರೂ ತೃಪ್ತಿ ಇರದು. ಹಾಗಾಗಿ ಮತ್ತೆ ಮತ್ತೆ ಸ್ವಾಮಿಯನ್ನು ನೋಡುವುದೇ ಒಂದು ಸೇವೆಯಾಗಿ ಜನ ಬರುತ್ತಾರೆ. ಇಲ್ಲಿ ಆಸೆ ಆಕಾಂಕ್ಷೆಗಳು ಹರಕೆ ಫಲಗಳೂ ಎಲ್ಲ ನಗಣ್ಯ. ಲಾಭನಷ್ಟಗಳ ಬೇರೀಜು ಬೇರೆ ಕಡೆ ಎಷ್ಟು ಬೇಕಾದರೂ ಇದ್ದೀತು. ಇಲ್ಲಿ ಮಾತ್ರ ಸ್ವಾಮಿಯ ದರ್ಶನವೇ ಲಾಭ. ಅದೇ ಪುರುಷಾರ್ಥ.

**ಭೋಗ ಶ್ರೀನಿವಾಸ :** ಇದೊಂದು ಸ್ವಾಮಿಯ ಬೆಳ್ಳಿಯ ಪ್ರತಿಮೂರ್ತಿ. ಕ್ರಿ.ಶ. 966 ರಲ್ಲಿ ಉತ್ಸವಗಳಲ್ಲಿ ಹೊರಕ್ಕೆ ಮೆರವಣಿಗೆಯಲ್ಲಿ ತೆಗೆದುಕೊಂಡು ಹೋಗಲು ಕಾಡವನ್ ಪೆರುನ್ ದೇವಿ ಸಾಮವ್ವೆರಾಣಿ ಈ ವಿಗ್ರಹವನ್ನು ಮಾಡಿಸಿ ಆಲಯಕ್ಕೆ ಕೊಟ್ಟದ್ದು ಶಾಸನೋಕ್ತವಾಗಿದೆ. ಈ ವಿಗ್ರಹವನ್ನು ಇಡಲು ಗರ್ಭಗುಡಿಯ ಎದುರು ಒಂದು ಇಳಂ ಕೋಯಿಲ್ ಸಣ್ಣಮಂಟಪವನ್ನು ಮಾಡಿದರೆಂದು ಹೇಳಲಾಗಿದೆ. ಸಾಯಣ ಮಂಟಪ ಇದೇ ಆಗಿರಬೇಕು. ನಂತರ ಎಂದೋ ಈ ವಿಗ್ರಹ ಗರ್ಭಗುಡಿಯನ್ನು ಸೇರಿರಬೇಕು. ಕೌತುಕ ಮೂರ್ತಿ ಎಂದು ಕರೆಯಲಾಗುವ ಈ ವಿಗ್ರಹ ಮೂಲದೇವರೊಡನೆ ಒಂದು ಬಂಗಾರದ ದಾರದಿಂದ ಸಂಬಂಧಿಸಲ್ಪಟ್ಟಿದೆ. ಇದು ಗರ್ಭಗುಡಿಯಿಂದ ತಿರುವಿಳಂ ಕೋಯಿಲ್‌ನ ಹೊರಬಾಗಿಲಿನವರೆಗೆ ಎಂದರೆ ಬಂಗಾರದ ಬಾಗಿಲಿನವರೆಗೆ ಬರುವಷ್ಟು ಉದ್ದವಿದೆ. ಕೌತುಕ ಬೇರವನ್ನು ಭೋಗ ಶ್ರೀನಿವಾಸ ಎಂದೂ ಹೇಳುತ್ತಾರೆ. ಇದಕ್ಕೆ ದಿನವೂ ಬೆಳಗ್ಗೆ ಸ್ನಪನವಾಗಿ ಸಂಜೆ ಸ್ನಪನ ಮಂಟಪದಲ್ಲಿ ಬಂಗಾರದ ಉಯ್ಯಾಲೆಯಲ್ಲಿ ಮಲಗಿಸಿ ಬೆಳಗ್ಗೆ ಎಬ್ಬಿಸಿ ಸುಪ್ರಭಾತ ಹಾಡಿ ಗರ್ಭಗುಡಿಗೆ ಪುನಃ ಸೇರಿಸುತ್ತಾರೆ. ಸಾಮವ್ವೆ ಹೇಳುವಂತೆ ಪುರಟ್ಟಾಸಿ ತಿಂಗಳಿನಲ್ಲಿ 9 ದಿನಗಳ ಉತ್ಸವದಲ್ಲಿ ಎಂದರೆ ಬ್ರಹ್ಮೋತ್ಸವದಲ್ಲಿ ದಿಕ್ಕೆ ಎರಡು ಬಾರಿ ಮೆರವಣಿಗೆ ಮಾಡಲು ಈ ವಿಗ್ರಹವನ್ನು ಬಳಸುತ್ತಿದ್ದಿರಬೇಕು. ಈಗ ಮಾತ್ರ ಸ್ನಾನ ಏಕಾಂತಸೇವೆಗಳಲ್ಲಿ ಬಳಸಲಾಗುತ್ತದೆ. ಏಕಾಂತ ಸೇವೆಯಲ್ಲಿ ಬಂಗಾರದ ತೊಟ್ಟಿಲಿನಲ್ಲಿ ಮಲಗಿದ ಸ್ವಾಮಿಗೆ ತಾಳ್ಳಪಾಕ ವಂಶದವರ ಸೇವೆಯಾಗಿ ಜೋಗುಳವನ್ನು ಹಾಡಲಾಗುತ್ತದೆ. (ಧನುರ್ಮಾಸದಲ್ಲಿ ಮಾತ್ರ ಏಕಾಂತ ಸೇವೆಯು ಗರ್ಭಗುಡಿಯಲ್ಲಿರುವ ಕೃಷ್ಣಸ್ವಾಮಿಗೆ ನಡೆಯುತ್ತದೆ).

ಭೋಗ ಶ್ರೀನಿವಾಸನ ಬೆಳ್ಳಿಯ ಮೂರ್ತಿಯನ್ನು ಮೂಲಬೇರದ ಕಾಲ ಬಳಿ ಇರುವುದನ್ನು ಕಾಣಬಹುದು. ಮೂಲ ಮೂರ್ತಿಯ ಪ್ರತಿ ಚಿತ್ರವೇ ಆದರೂ ಭೋಗ ಶ್ರೀನಿವಾಸನ ಕೈಯ್ಯಲ್ಲಿರುವ ಚಕ್ರ ಶಂಖಗಳು ಸ್ವಲ್ಪ ತಿರುಗಿದಂತೆ ಕಾಣುತ್ತದೆ. ಎಂದರೆ ಇಲ್ಲಿನ ಚಕ್ರ ಪ್ರಯೋಗದ ರೂಪದಲ್ಲಿ ಚಕ್ರದ ಅಲಗು ಮೊನೆಯಾಗಿ ಕಾಣುವುದನ್ನು 'ತಿರುಪತಿ ತಿಮ್ಮಪ್ಪ' ಪುಸ್ತಕದಲ್ಲಿ ಪ್ರಾಚಾರ್ಯ ಎಸ್.ಕೆ. ರಾಮಚಂದ್ರರಾಯರು ಗುರುತಿಸಿದ್ದಾರೆ. ಇಲ್ಲಿನ ಭೋಗ ಶ್ರೀನಿವಾಸನ ಕಾಲ ಕೆಳಗೆ ಷಾಡ್ಗುಣ್ಯ ಯಂತ್ರವಿರುವುದರಿಂದಾಗಿ ಮೂಲವರರ ಕಾಲ ಕೆಳಗೂ ಇಂಥದೇ ಒಂದು ಷಾಡ್ಗುಣ್ಯ ಯಂತ್ರ ಇರಬೇಕೆಂದು ಹೇಳಲಾಗಿದೆ.

**ಓಲಗ ಶ್ರೀನಿವಾಸ :** ಬಲಿಬೇರ ಎಂತಲೂ ಈ ಮೂರ್ತಿಗೆ ಹೆಸರು ಉಂಟು. ಸ್ವಾಮಿಗೆ ನೈವೇದ್ಯವನ್ನು ನೀಡಿದ ನಂತರ ಪರಿವಾರ ದೇವತೆಗಳಿಗೆ ದಿಗ್ದೇವತೆಗಳಿಗೆ ಬಲಿಯನ್ನು ನೀಡಲು ಹೊರಕ್ಕೆ ಬರುವುದುಂಟು. ಆದರೆ ಇಲ್ಲಿನ ಬಲಿಬೇರ ತಿರುಮಾಮಣಿ ಮಂಟಪದಿಂದ ಹೊರಕ್ಕೆ ಬರುವುದೇ ಇಲ್ಲ. ತಿರುಮಾಮಣಿ ಮಂಟಪದಲ್ಲಿ ದಿನವೂ ಸ್ವಾಮಿಯ ಓಲಗ ನಡೆಯುತ್ತದೆ. ಬೆಳಗಿನ ಅರ್ಚನೆ ತೋಮಾಲೆ ಸೇವೆಗಳು ಮೂಲವರರಿಗೆ ನಡೆದ ನಂತರ ತಿರುಮಾಮಣಿ ಮಂಟಪದಲ್ಲಿ ಚಿನ್ನದ ಸಿಂಹಾಸನದಲ್ಲಿ ಕೊಲುವು ಶ್ರೀನಿವಾಸನನ್ನು ಆಸೀನ ಗೊಳಿಸಿ ದರ್ಬಾರು, ರಾಜಸಭೆ ನಡೆಯುತ್ತದೆ. ಅಲ್ಲಿ ಚಿನ್ನದ ಕೊಡೆ ಬೆಳ್ಗೊಡೆಗಳ ವೈಭವದಲ್ಲಿ ಓಲಗ. ಶ್ರೀನಿವಾಸನಿಗೆ ಆ ದಿನದ ಪಂಚಾಂಗವನ್ನು ವಿವರಿಸಿ ಹಿಂದಿನ ದಿನದ ಆದಾಯ ವೆಚ್ಚಗಳನ್ನು ನಿವೇದಿಸಿ ಆ ದಿನದ ಸೇವಾದಾರರನ್ನು ಗೋತ್ರ, ನಾಮಗಳಿಂದ ಪರಿಚಯಿಸಿ ಆ ದಿನದ ವಿವಿಧ ನಿವೇದನೆಗಳಿಗೆ ಬೇಕಾಗುವ ದಿತ್ತ (ಪ್ರಸಾದ ತಯಾರಿಕೆಯ ವಸ್ತುಗಳ ವಿವರ) ವನ್ನು ಸ್ವಾಮಿಗೆ ಅರಿಕೆ ಮಾಡಿಕೊಳ್ಳಲಾಗುತ್ತದೆ. ಒಂದು ರೀತಿಯಲ್ಲಿ ಈ ಸ್ವಾಮಿ ಆಲಯದ ಉಸ್ತುವಾರಿಯ - ನಡಾವಳಿಯ ಮೇಲೆ ಅಧಿಕಾರವನ್ನು ಹೊಂದಿರುವಂತೆ ಭಾವಿಸಬಹುದು.





ಕಷ್ಟವ ಕಳೆಯೊ ಹತ್ತವತಾರದ ಪ್ರಭುವೆ.

ತಿರುಮಲೆ ಜನರಿಗೆ ಸುಲಭಗಮ್ಯವಾಗದೆ ತಿರುಚಾನೂರು ಸ್ವಾಮಿಯ ಪ್ರತಿನಿಧಿ ಸ್ಥಳವಾಗಿದ್ದ ಕಾಲದಲ್ಲಿ ಅಲ್ಲಿ ರಾಮಾನುಜ ವಾರ್ತೆಯನ್ನು ವಿಸ್ತರಿಸಲು, ವಿಶಿಷ್ಟಾದ್ವೈತ ತತ್ವವನ್ನು ಪ್ರಸಾರ ಮಾಡಲು, ಶ್ರೀವೈಷ್ಣವ ದೀಕ್ಷೆ ನೀಡಲು ತಿರುಮಂತ್ರ ಸಾಲೆಯೊಂದು ಇದ್ದಿತೆಂಬುದು ಶಾಸನೋಕ್ತವಾಗಿದೆ. ತಿರುಚಾನೂರು ಪ್ರಾಧಾನ್ಯವನ್ನು ಕಳೆದುಕೊಂಡ ನಂತರ ಅಲ್ಲಿನ ವಿಗ್ರಹವನ್ನು ತಂದು ವೆಂಕಟೇಶ್ವರ ಸ್ವಾಮಿಯ ಆಲಯಕ್ಕೆ ಸೇರಿಸಿರಬೇಕೆಂಬ ಅಭಿಪ್ರಾಯವನ್ನು ಆಲಯ ಪ್ರಧಾನ ಪುರುಷರಾಗಿದ್ದ ಟಿ. ಕೆ. ಟಿ. ರಾಘವಾ ಚಾರ್ಯರು ತಿಳಿಸಿದ್ದಾರೆ.

**ಉಗ್ರಶ್ರೀನಿವಾಸ :** ಉಗ್ರ ಶ್ರೀನಿವಾಸ ಉತ್ಸವ ಮೂರ್ತಿಯಾಗಿ ಒಂದು ಕಾಲದಲ್ಲಿ ಆಲಯದಿಂದ ಹೊರಕ್ಕೆ ಮೆರವಣಿಗೆಯಲ್ಲಿ ಇಬ್ಬರು ನಾಯಕಿಯರ (ಶ್ರೀದೇವಿ ಭೂದೇವಿ) ಜೊತೆಗೆ ಬರುತ್ತಿದ್ದಂತೆ ಹೇಳಿಕೆ ಉಂಟು. ಈ ಉತ್ಸವ ಮೂರ್ತಿಯ ಮೆರವಣಿಗೆ ಒಮ್ಮೆ ನಡೆಯುತ್ತಿದ್ದಾಗ ಬೆಂಕಿ ಅನಾಹುತವಾಗಿ ಇದನ್ನು ಸೂರ್ಯನ ಬೆಳಕಿಗೆ ಹೊರಕ್ಕೆ ತರಬಾರದೆಂದು ನಿರ್ಣಯವಾಯಿತು. ಈ ಬೆಂಕಿ ಅನಾಹುತ ನಡೆದುದು ಕ್ರಿ.ಶ. 1330 ರ ಹೊತ್ತಿಗೆ ಎನ್ನುವರು.

ಗರ್ಭಗುಡಿಯಲ್ಲಿಯೇ ಇರುವ ಒಂದೂವರೆ ಅಡಿ ಎತ್ತರದ ಈ ಮೂರ್ತಿಗೆ ಎಡ ಬಲಗಡೆಯಲ್ಲಿ ಶ್ರೀದೇವಿ ಭೂದೇವಿಯರು ಇದ್ದಾರೆ. ಮೂಲಮೂರ್ತಿಯ ಪ್ರತಿ ಮೂರ್ತಿಯಾಗಿರುವ ಉಗ್ರಶ್ರೀನಿವಾಸ 1330 ರ ನಂತರ ರಾತ್ರಿಯ ಹೊತ್ತು ಮಾತ್ರವೇ ಹೊಗಬರುವಂತಾಯಿತು. ಕಾರ್ತೀಕ ಮಾಸದ ಉತ್ಥಾನದ್ವಾದಶಿಯಂದು ರಾತ್ರಿ ಮೆರವಣಿಗೆಯಲ್ಲಿ ತಿರುಮಲೆಯ ತೇರು ಬೀದಿಗಳಲ್ಲಿ ನಡೆದು ಸೂರ್ಯಹುಟ್ಟುವ ಮೊದಲೇ ಗರ್ಭಗುಡಿಯನ್ನು ಸೇರುತ್ತದೆ. ಈ ವಿಗ್ರಹವನ್ನು ಮುಕ್ಕೋಟಿ ದ್ವಾದಶಿ, ಉತ್ಥಾನದ್ವಾದಶಿ ಮತ್ತು ದ್ವಾದಶ ಆರಾಧನೆಗಳಲ್ಲಿ ಮಾತ್ರವೇ ಈಗ ಬಳಸುತ್ತಾರೆ.



ಉತ್ಸವ ಶ್ರೀನಿವಾಸ (ಮಲೆಯಪ್ಪಸ್ವಾಮಿ) : ಈಗ ಎಲ್ಲ ಉತ್ಸವಗಳಲ್ಲಿ ಗುಡಿಯಾಚೆಗೆ ಬಂದು ತೇರುಬೀದಿಯಲ್ಲಿ ತಿರುಗಾಡುವ, ಗುಡಿಯೊಳಗೆ ದಿನವೂ ಕಲ್ಯಾಣೋತ್ಸವದಲ್ಲಿ ಭಾಗವಹಿಸಿ ನಂತರ ಡೋಲೋತ್ಸವ, ಬ್ರಹ್ಮೋತ್ಸವ ಗಳಲ್ಲಿಯೂ ಸಾಯಂಕಾಲ ಸಹಸ್ರ ದೀಪಾಲಂಕಾರ ಸೇವೆಯಲ್ಲಿಯೂ ಸೇವೆಯನ್ನು ಪಡೆಯುವ ಪಂಚಲೋಹ ವಿಗ್ರಹ. ಮೂರಡಿ ಎತ್ತರದ ಈ ವಿಗ್ರಹ ಉಗ್ರ ಶ್ರೀನಿವಾಸನ ವಿಗ್ರಹಕ್ಕಿಂತ ಸ್ವಲ್ಪ ಎತ್ತರವಿದ್ದು ದೂರಕ್ಕೂ ಎದ್ದು ಕಾಣುವುದು. ತಿರುಮಲೆಯ ಆಲಯದ ವರದರಾಜ ಸ್ವಾಮಿ ಗುಡಿಯ ಉತ್ತರದ ಗೋಡೆಯ ಮೇಲೆ ಎಂದರೆ ಬೆಳ್ಳಿಯ ಬಾಗಿಲನ್ನು ದಾಟಿ ಯಾತ್ರಿಕರು ಒಳಹೊಕ್ಕಾಗ ಎಡಕ್ಕೆ ತಿರುಗುವ ಸ್ಥಳದಲ್ಲಿ ಗೋಡೆಯ ಮೇಲೆ ಒಂದು ಶಾಸನ ಇದೆ. 1339 ರಲ್ಲಿ ತ್ರಿಭುವನ ಚಕ್ರವರ್ತಿ ಶ್ರೀ ರಂಗನಾಥ ಯಾದವರಾಯನ ಕಾಲದ ಶಾಸನ. ಶ್ರೀ ಭೂದೇವಿಯರೊಡನೆ ಇರುವ ಮಲೆಯಪ್ಪಸ್ವಾಮಿಯ (ಮಲೈಕುನಿಯ ನಿನ್ರ ಪೆರುಮಾಳ್) ಉಲ್ಲೇಖ ಪ್ರಥಮ ಬಾರಿಗೆ ಈ ಶಾಸನದಲ್ಲಿ ಕಂಡುಬರುತ್ತದೆ. ಈ ವಿಗ್ರಹಗಳು ತಿರುಚಾನೂರಿನ ತಿರುವಿಳಂಕೋಯಿಲಿನಲ್ಲಿದ್ದ ಮೂರ್ತಿಗಳೆಂದೂ, ಅವುಗಳನ್ನೇ ಬೆಟ್ಟದ ಒಂದು ಕೊರಕಲಿನಲ್ಲಿ ಕಂಡುಕೊಳ್ಳಲಾಯಿತೆಂದೂ ವೀರರಾಘವಾಚಾರ್ಯ ಅವರು ಅಭಿಪ್ರಾಯ ಪಟ್ಟಿದ್ದಾರೆ. ಉಗ್ರ ಶ್ರೀನಿವಾಸನ ಬದಲಿಗೆ ಉತ್ಸವಗಳಲ್ಲಿ ಈ ಮೂರ್ತಿ ಭಾಗವಹಿಸಲು ಆರಂಭವಾಯಿತು. ಬ್ರಹ್ಮೋತ್ಸವದಲ್ಲಿನ ಗರುಡ ಸೇವೆಯಂದು ಮೂಲದೇವರಿಗೆ ಅಲಂಕಾರ ವಾಗುವ ಲಕ್ಷ್ಮಿಹಾರ, ಕಾಸಿನ ಹಾರ ಮೊದಲಾದ ಅನರ್ಘ್ಯ ಆಭರಣಗಳು ಈ ದೇವರಿಗೆ ಅಲಂಕಾರವಾಗುತ್ತವೆ. ಹಾಗಾಗಿ ತಿರುಮಲೆಯಲ್ಲಿ ಮೊದಲ ದೈವ ಮೂಲ ವೆಂಕಟೇಶ್ವರ ಸ್ವಾಮಿ ಯಾದರೆ ಎರಡನೆಯ ಪ್ರಾಧಾನ್ಯ, ಮೂಲ ಸ್ವಾಮಿಯ ಪ್ರತಿನಿಧಿಯಾದ ಪ್ರತಿರೂಪವಾದ ಉತ್ಸವ ಮೂರ್ತಿ ಮಲೆಯಪ್ಪನದು.

ಮೂಲವರನ್ನು ತಿರುವೆಂಗಡ ಮುಡೈಯಾನ್ ಎಂದೂ ಭೋಗ ಶ್ರೀನಿವಾಸನನ್ನು ಮಣವಾಳ ಪೆರುಮಾಳ್ ಎಂದೂ, ಕೊಲುವು ಶ್ರೀನಿವಾಸನನ್ನು ಅಳಗಪ್ಪಿರನಾರ್ ಎಂದೂ ಉಗ್ರ ಶ್ರೀನಿವಾಸನನ್ನು ವೆಂಕಟತುರೈವಾರ್ ಎಂದೂ ಕರೆಯಲಾಗುತ್ತದೆ. ಉತ್ಸವ ಮೂರ್ತಿಯನ್ನು ಮಲೈಕುನಿಯ ನಿನ್ರ ಪೆರುಮಾಳ್ ಅಥವಾ ಮಲೆಯಪ್ಪಸ್ವಾಮಿ ಎಂದು ಕರೆಯಲಾಗುತ್ತದೆ.

ಹೀಗೆ ಐದು ವಿಧದ ಏಕರೂಪದ ಮೂರ್ತಿಗಳುಳ್ಳ ವೆಂಕಟೇಶ್ವರ ಸ್ವಾಮಿಯ ಗುಡಿಯನ್ನು ಕೋಯಿಲ್ ಆಳ್ವಾರ್ ಎಂದು ಕರೆಯುವುದು ಸಹಜವೇ ಆಗಿದೆ. ಅದೊಂದು ಭಕ್ತಿಯ ಮಡು; ಭಕ್ತಿಸಾಗರ.

★★★★★



# ಬ್ರಹ್ಮೋತ್ಸವ ವಾಹನ ವಿವರ

**7-10-2002 - 15-10-2002**

ಬ್ರಹ್ಮನೇ ಬ್ರಹ್ಮೋತ್ಸವದ ಆರಂಭಕರ್ತೃವೆಂದು ಹೇಳಲಾಗಿದೆ. ಆದನ್ನು ನಿರೂಪಿಸ ಲೆಂಬಂತೆ ಬ್ರಹ್ಮನು ಆಕಾರರಹಿತನಾಗಿ ಇಡೀ ಬ್ರಹ್ಮೋತ್ಸವವನ್ನು ಚಿಕ್ಕ ರಥದಲ್ಲಿದ್ದುಪರಿಶೀಲಿಸುತ್ತಾನೆ.

ಹತ್ತುದಿನಗಳ ಬ್ರಹ್ಮೋತ್ಸವದ ಮೊದಲನೆಯ ದಿನ ಸ್ವಲ್ಪ ನೀರಸವೆಂದೇ ಹೇಳಬೇಕು. ಇತರ ದಿನಗಳ ವೈಭವ, ಅಲಂಕರಣ, ಮಂತ್ರ ಘೋಷಗಳ ದಿಗಂತ ವಿಶ್ರಾಂತತೆಗಳಿಗೆ ಹೋಲಿಸಿ ನೋಡಿದಲ್ಲಿ, ಮೊದಲದಿನದ ಸಂಜೆ ತಿರುಮಲೆ ದೇವಸ್ಥಾನದ ನಿತ್ಯ ಪೂಜೆಗಳ ನಂತರ ಸ್ವಾಮಿಯ



ಸೇನಾಧಿಪತಿ ವಿಷ್ವಕ್ಸೇನರು ಗ್ರಾಮೋತ್ಸವಕ್ಕೆ ಹೊರಟು, ಕಲ್ಯಾಣ ಮಂಟಪದ ಯಾಗಶಾಲೆಗೆ ಅಗತ್ಯವಾದ ಪವಿತ್ರ ಮೃತ್ತಿಕೆಯನ್ನು ಸಂಗ್ರಹಿಸಿಕೊಂಡು ಬರುತ್ತಾರೆ. ಈ ಸಮಯದಲ್ಲಿ ಮಾರನೆಯ ದಿನದಿಂದ ಆರಂಭವಾಗುವ ಬ್ರಹ್ಮೋತ್ಸವಕ್ಕೆ ಬರಬೇಕೆಂದು ವಿವಿಧ ದೇವತೆಗಳನ್ನು ಆಹ್ವಾನಿಸುವಿಕೆಯೂ ನಡೆಯುತ್ತದೆ. ಅಂಕುರಾರ್ಪಣೆ ನಡೆಯುತ್ತದೆ.

ವೈಖಾನಸಾಗಮದ ಎಲ್ಲ ಶಾಸ್ತ್ರ ವಿಧಿಗಳೊಡನೆ ಮಾರನೆಯ ದಿನ ಪ್ರಾತಃಕಾಲ ಪೆರಿಯ ಪೆರುಮಾಳರ ಬಳಿ ನಿಂತು ಅವರ ಒಪ್ಪಿಗೆಯನ್ನು ಪಡೆದು ಅಷ್ಟದಿಕ್ಪಾಲಕರನ್ನು ಆಹ್ವಾನಿಸಿ ಅವರನ್ನು ಬಲಿ ಆವರಣದ ಎಂಟು ದಿಕ್ಕುಗಳಲ್ಲಿ ಸ್ಥಾಪಿಸಲಾಗುತ್ತದೆ. ಈ ದಿವ್ಯ ಸನ್ನಿವೇಶವನ್ನು ಸಂದರ್ಶಿಸುವ ಭಾಗ್ಯ ಪಲವರಿಗೆ ಮಾತ್ರವೇ; ಕಾರಣ ದೇವಾಲಯದ ಒಳಗಡೆಯ ಸ್ಥಳ ಬಹು ಕಡಮೆ ಇರುವಿಕೆ. ಬಂಗಾರದ



ಧ್ವಜಸ್ತಂಭದ ಮೇಲೆ ನೂತನ ವಸ್ತ್ರದ ಗರುಡಧ್ವಜವನ್ನು ಪ್ರಧಾನ ಪುರೋಹಿತರು ಏರಿಸುತ್ತಾರೆ. ಸ್ವಾಮಿಯನ್ನು ಅಲಂಕರಿಸಿ ನಾಚ್ಚಿಯಾರರು ಗಳೊಡನೆ ತಿರುಮಲರಾಯ ಮಂಟಪದಲ್ಲಿ ಒಡ್ಡೋಲಗವನ್ನು ನಡೆಸಲಾಗುತ್ತದೆ. ಪ್ರತಿದಿನವೂ ಮಲೆಯಪ್ಪಸ್ವಾಮಿಯ ಉತ್ಸವ ಆರಂಭವಾಗುವ ಮೊದಲು ಬ್ರಹ್ಮರಥ (ಅಲಂಕಾರ ಸಹಿತ, ಮೂರ್ತಿರಹಿತ ರಥ) ಉತ್ಸವ ಮಾರ್ಗದಲ್ಲಿ ಹೊರಡಬೇಕು.

ಆ ದಿನ ಸಂಜೆ ಶ್ರೀ ವೆಂಕಟೇಶ್ವರನ ಉತ್ಸವ ಮೂರ್ತಿ ಮಲೆಯಪ್ಪಸ್ವಾಮಿ ಮತ್ತು ಶ್ರೀದೇವಿ ಭೂದೇವಿಯರಿಗೆ ಸಪ್ತಭೋಗಗಳ ದೊಡ್ಡ ಶೇಷವಾಹನದಲ್ಲಿ ಮೆರವಣಿಗೆ ಮಾಡ ಲಾಗುತ್ತದೆ. ಶೇಷನು ಸ್ವಾಮಿಯ ಪ್ರಥಮ ಕಿಂಕರನಾದದ್ದರಿಂದಲೂ ಅತಿ ಸನ್ನಿಹಿತ ನಾದದ್ದರಿಂದಲೂ



ಬ್ರಹ್ಮೋತ್ಸವದಲ್ಲಿ ಸ್ವಾಮಿ ಸೇವೆಯ ಪ್ರಥಮಾವಕಾಶ ಶೇಷನಿಗೆ ದೊರೆಯುವುದು. ಶೇಷ ಶೇಷೀ ಭಾವದ ವಿಶಿಷ್ಟಾದ್ವೈತ ಸಿದ್ಧಾಂತ ಇಲ್ಲಿ ಅವಧಾರಿತವಾಗಿ ಶೇಷಾಧಿರೋಹಿ ಶೇಷಿಯನ್ನು (ನಾರಾಯಣನನ್ನೂ) ಸಂದರ್ಶಿಸಿದವರ ಕಾಮ ಮೋಹ ಮೊದಲಾದ ಅರಿಷಡ್ವರ್ಗ ನಾಶವಾಗುವುದೆಂದು ಹೇಳಲಾಗಿದೆ.

ಮೂರನೆಯದಿನ ಪ್ರಾತಃಕಾಲ ಮಲೆಯಪ್ಪ ಸ್ವಾಮಿ ಮಾತ್ರವೇ ಸಣ್ಣಶೇಷವಾಹನನಾಗಿ ಹೊರಹೊರಡುವನು. ದೇವರು ಭಕ್ತಜನರ ವತ್ಸಲನೆಂಬುದನ್ನು ಅವಧಾರಿಸಲು ಮತ್ತೆ



ಶೇಷವಾಹನನಾಗುತ್ತಾನೆ ಎಂಬುದು ಇಲ್ಲಿನ ಸಂಕೇತಾರ್ಥವೆಂದು ಹೇಳಬಹುದು.

ಅಂದು ರಾತ್ರಿ ಸ್ವಾಮಿಯು ವೀಣಾಪಾಣಿ ಸರಸ್ವತಿಯಾಗಿ ಹಂಸವಾಹನನಾಗಿ ಮೆರೆಯುತ್ತಾನೆ. ರಾಕ್ಷಸರಿಂದ ವೇದಾಪಹರಣ ವಾದಾಗ ಸ್ವಯಂಭುವು ಹಂಸರೂಪಿಯಾಗಿ ಬ್ರಹ್ಮನಿಗೆ ವೇದಗಳ ಪಾಠ ಹೇಳಿದ ಪ್ರಸಂಗವನ್ನು ನೆನಪಿಗೆ ತರುವ ಈ ಹಂಸವಾಹನನು ಪರಮಹಂಸ ಎಂಬುದು ಅವಗಾಹನೆ ಯಾಗಲೆಂದೇ ಈ ವಾಹನ.

ಮಾರನೆಯ ದಿನ ಬೆಳಗ್ಗೆ ಸಿಂಹವಾಹನ. ನೃಸಿಂಹನಾಗಿ ವಿಷ್ಣು ಹಿರಣ್ಯಕಶಿಪುವನ್ನು ಸಂಹಾರಮಾಡಿದ್ದು ನೆನಪಿಗೆ ಬರುತ್ತದೆ. 'ಮೃಗಾಣಾಂ ಚ ಮೃಗೇಂದ್ರೋಽಹಂ' ಎನ್ನುವ ಗೀತಾವಾಕ್ಕಿನಂತೆ ತನ್ನ ತೇಜೋಂಶ ಸಿಂಹದಲ್ಲೂ ಇದೆ ಎಂಬುದನ್ನು ಈ ವಾಹನ ಸೂಚಿಸುತ್ತದೆ. 'ಸ್ವಯಮೇವ ಮೃಗೇಂದ್ರತಾ' ಎಂಬಂತೆ ಮೃಗೇಂದ್ರವಾಹನನೂ



ಸ್ವಯಮೇವನೇ ಆಗಿದ್ದಾನೆ ಎಂಬುದನ್ನೂ ಇದು ಅವಧಾರಿಸುತ್ತದೆ.

ಅಂದಿನ ರಾತ್ರಿ ಉಭಯ ನಾಚ್ಚಿಯಾರು ಗಳೊಡನೆ ಸ್ವಾಮಿಯು ದಿವ್ಯಾಲಂಕಾರ ಭೂಷಿತನಾಗಿ ಮುತ್ತಿನ ಚಪ್ಪರದ ವಾಹನದಲ್ಲಿ ಭಕ್ತಜನ ಹೃತ್ಕುಮುದಕೋರಕನಾಗಿ ಮೆರೆಯುತ್ತಾನೆ. ಇದು ಭವಿಷ್ಯೋತ್ತರ ಪುರಾಣದ ಆಧಾರದಿಂದ ಅದನ್ನನುಸರಿಸಿ ನಡೆಯುವ ಗೌಣೋತ್ಸವ ಎಂದೂ ಹೇಳುವವರುಂಟು.

ಮೂರನೆಯ ದಿನ ಬೆಳಗ್ಗೆ ಮಲೆಯಪ್ಪಸ್ವಾಮಿ ಉಭಯನಾಚ್ಚಿಯಾರುಗಳೊಡನೆ ಅಲಂಕೃತ ನಾಗಿ ಕಲ್ಪವೃಕ್ಷವಾಹನ ಆಗುತ್ತಾನೆ. ಅಭೀಷ್ಟಿತಾರ್ಥವನ್ನು ನೀಡುವ ಕಲ್ಪವೃಕ್ಷವನ್ನು ಅಧಿರೋಹಿಸುವ ಸ್ವಾಮಿ ಕಲಿಯುಗವರದ ಎಂಬುದರಲ್ಲಿ ಎರಡು ಅಭಿಪ್ರಾಯಕ್ಕೆ ತಾವೆಲ್ಲಿದೆ? ಕಲ್ಪವೃಕ್ಷವೂ ಕಲಿಯುಗ ವರದನಿಗಿಂತ ಕಡಮೆಯೇ



ಎಂಬುದನ್ನು ಸೂಚಿಸುವುದೇ ಈ ವಾಹನದ ಉದ್ದೇಶವೆಂಬಂತಿದೆ.

ಅಂದು ಸಂಜೆ ಶ್ರೀದೇವಿ ಭೂದೇವಿಯರೊಡನೆ ಮಲೆಯಪ್ಪಸ್ವಾಮಿಯ ಸರ್ವಭೂಪಾಲ ವಾಹನದಲ್ಲಿ - ಬಂಗಾರದ ನೀರಿನಿಂದ ತೊಳೆಯಲ್ಪಟ್ಟ ವಾಹನದಲ್ಲಿ



ದೇವರು ದಿವ್ಯಪೀತಾಂಬರಗಳನ್ನುಟ್ಟು ನಯನಾನಂದ ಕರವಾಗಿ ನಿಂತ ಭಂಗಿಯಿಂದ ಆತ್ಮ ಭೂಪಾಲನಂತೆ ಕಂಡುಬರುತ್ತಾನೆ. ಸರ್ವ ಭೂಪಾಲ ವಾಹನವನ್ನೂ ಗೌಣೋತ್ಸವದ ಒಂದು ಅಂಗವೆಂದು ಹೇಳುವುದುಂಟು.

ಮಾರನೆಯ ದಿನ ಪ್ರಾತಃಕಾಲ ಬ್ರಹ್ಮೋತ್ಸವದ ಒಂದು ರಸಶಿಖರವನ್ನು ತಲುಪುತ್ತೇವೆ. ಅಂದು ಗರುಡವಾಹನೋತ್ಸವ. ಬೆಳಗ್ಗೆ ಮೋಹಿನಿ ಅವತಾರ. ದೇವದಾನವರಲ್ಲಿ ಅಮೃತಕ್ಕಾಗಿ ಕಾದಾಟವಾದಾಗ ಮೋಹಿನೀ ರೂಪದಿಂದ ಶ್ರೀಮನ್ನಾರಾಯಣನು



ಅಮೃತವಿತರಣೆ ಮಾಡಿದುದನ್ನು ನೆನೆಸಿಕೊಳ್ಳಬಹುದು. ಮಾನವನ ಮನವೂ ಒಂದು ದೇವದಾನವ ಯುದ್ಧಭೂಮಿಯೇ ಆಗಿ, ಶಾಶ್ವತ ಸಾತ್ವಿಕ ತಾಮಸ ಶಕ್ತಿಗಳು ನಿರಂತರವಾಗಿ ಹೊಡೆದಾಡುವಾಗ ದೈವವು ಸಾತ್ವಿಕತೆಯನ್ನೆತ್ತಿ ಹಿಡಿದು ತಾಮಸ ಶಕ್ತಿಗಳನ್ನು ನಾಶಪಡಿಸುವುದು ಎಂಬುದನ್ನಿದು ಸೂಚಿಸುವುದು. (ಗರುಡೋತ್ಸವದ ಒಂದು ಅಂಗವೇ ಈ ಮೋಹಿನೀ ಅವತಾರ ಎನ್ನುವವರುಂಟು.)

ಅಂದು ಸಂಜೆ ವೇದಗಳ ಪ್ರತೀಕವಾದ ಗರುಡನ ಮೇಲೇರಿ ಸ್ವಾಮಿಯು ಆಸ್ತಿಕರಿಗೆ ಕಂಡುಬರುತ್ತಾನೆ. 'ಗರುಡನು ನಿತ್ಯಸೂರಿ, ಸ್ವಾಮಿಯದಾಸ, ಸಖ, ವಾಹನ,



ಧ್ವಜ ಚಿಹ್ನೆಯಾಗಿ ಬೆಳಗುತ್ತಿದ್ದಾನೆ. ಸಖಿನೆಂಬುದರಿಂದ ಗರುತ್ಮಂತನಿಗೆ ತಿಳಿಯದ ಸ್ವಾಮಿ ರಹಸ್ಯ ಯಾವುದೂ ಇಲ್ಲ ಎಂಬುದು ತಿಳಿಯುತ್ತದೆ.' ಮಲೆಯಪ್ಪಸ್ವಾಮಿ ಗರುಡವಾಹನ ವನ್ನೇರಿದಾಗ ಅಪರೂಪದ ಮಕರಕಂಠಿ, ಲಕ್ಷ್ಮೀಹಾರಗಳನ್ನು ಧರಿಸಿ ಶೋಭಾಯಮಾನನಾಗಿ ಕಂಡು ಬರುತ್ತಾನೆ. ಮೂಲವರರಿಗೆ ಆಭರಣಗಳಾದ ಲಕ್ಷ್ಮೀಹಾರ, ಮೊದ ಲಾದವು ಇಲ್ಲಿ ಗರುಡವಾಹನದಲ್ಲಿ ಉತ್ಸವರಿಗೆ ಆಭರಣ ಗಳಾಗುತ್ತವೆ. ಶ್ರೀವಿಲ್ಲಿ ಪುತ್ತೂರಿನ ಶ್ರೀ ಗೋದಾದೇವಿ ಯವರ ಕಡೆಯಿಂದ ತುಳಸೀ ಹಾರಗಳು ಬಂದು ಸೇರುತ್ತವೆ. ಮದರಾಸಿನ ಶ್ವೇತ ಛತ್ರಗಳು ಸ್ವಾಮಿಯ ಸೇವೆಗೆ ಆಗಮಿಸುತ್ತವೆ. ಆಂಧ್ರಪ್ರದೇಶ ಸರ್ಕಾರದ ವತಿಯಿಂದ ರೇಷ್ಮೆ ವಸ್ತ್ರಗಳು ಬರುತ್ತವೆ, ಸ್ವಾಮಿಗೆ ಅಲಂಕಾರ ವಾಗಲು.

ಮಾರನೆಯ ದಿನ ಮಲೆಯಪ್ಪಸ್ವಾಮಿಗೆ ಬೆಳಗ್ಗೆ ಹನುಮದ್ವಾಹನ, ಸಮುದ್ರ ಸೇತುವಿನಲ್ಲಿ ರಾಮನನ್ನು ಹೆಗಲಲ್ಲಿ ಹೊತ್ತು ನಡೆದ ಹನುಮಂತ ನೆನಪಿಗೆ ಬರುತ್ತಾನೆ.



ತ್ರೇತಾಯುಗದ ಶ್ರೀರಾಮನೇ ಕಲಿಯುಗದ ವೆಂಕಟನಾಥನಾಗಿದ್ದಾನೆ ಎಂಬುದನ್ನು ಒತ್ತಿ ಹೇಳಲು ಈ ಹನುಮದ್ವಾಹನವಿದೆ.

ಅಂದು ಮಧ್ಯಾಹ್ನ ಸ್ವಾಮಿ ವಸಂತೋತ್ಸವದಲ್ಲಿ ಪಾಲುಗೊಳ್ಳುತ್ತಾನೆ. ಉಭಯ ನಾಚ್ಚಿಯಾರು ಗಳೊಡನೆ ಪಶ್ಚಿಮವೀಧಿಯ ವಸಂತಮಂಟಪ ದಲ್ಲಿ ಸರ್ವಸುಗಂಧಪೂರಿತ ಜಲದಲ್ಲಿ ಅಭಿಷಿಕ್ತವಾದ ಮಲೆಯಪ್ಪಸ್ವಾಮಿ ಆಲಯಕ್ಕೆ ಹಿಂದಿರುಗಿ ಬಂದು (ಈ ಬಾರಿ ಕನಕ ರಥವನ್ನೇರಿ ಸ್ವಾಮಿ ವಸಂತೋತ್ಸವಕ್ಕೆ ಬರುತ್ತಾನೆ. ಇದನ್ನು ಸುವರ್ಣ ರಥರಂಗ ಡೋಲೋತ್ಸವ ಎಂದೂ ಕರೆಯಲಾಗಿದೆ.) ಸಂಜೆ ಗಜವಾಹನನಾಗಿ ಗ್ರಾಮೋತ್ಸವಕ್ಕೆ ಹೊರಡುತ್ತಾನೆ. 'ಮೊಸಳೆಗೆ ಸಿಕ್ಕ ಆನೆಯನ್ನು ರಕ್ಷಿಸಿದಂತೆ', 'ಕರಿರಾಜ ಕಷ್ಟದಲಿ ಆದಿಮೂಲಾ ಎಂದು ಕರೆಯಲಾಕ್ಷಣ ಬಂದು ಒದಗಿದ ಹರಿ', ಹಾಗೆ ಶರಣಾಗತರಾಗಿ ನಾವೂ ರಕ್ಷಿಸಲ್ಪಡಬಹುದು ಎಂಬುದು ಇಲ್ಲಿ ಕಂಡುಬರುವ ಅಂಶ.



ಮಾರನೆಯ ದಿನ ಬೆಳಗ್ಗೆ ಸೂರ್ಯಪ್ರಭವಾಹನ ಅಂದು ರಾತ್ರಿ ಚಂದ್ರಪ್ರಭವಾಹನ. ಸೂರ್ಯಚಂದ್ರರು ದೈವ ನಿಯಾಮಿತರು ಎಂಬುದನ್ನು ಇದು ಸಂಕೇತಿಸುತ್ತದೆ. ಸೂರ್ಯನ ಜ್ಞಾನ, ಚಂದ್ರನ ಶಾಂತಿ, ತಂಪುಗಳಿಗೆಲ್ಲವೂ ಅಧಿಪತಿ ಅವನೇ ಎಂಬುದು ಇಲ್ಲಿ ಸ್ಪಷ್ಟವಾಗುತ್ತದೆ. ಕಪಿಲತೀರ್ಥದ ಪಕ್ಕದಲ್ಲಿ 'ಇಡಾ' ಎಂಬ ಸೂರ್ಯನಾಡಿ, ತಿರುಮಲೆ ಬೆಟ್ಟದ ಚಂದ್ರಪುಷ್ಕರಿಣಿಯ ಬಳಿ ಪಿಂಗಳ ಎನ್ನುವ







ಚಂದ್ರನಾಡಿ ಇರುವುದರಿಂದ ಸೂರ್ಯಚಂದ್ರನಾಡಿಗಳ ಮೂಲಕ ಸ್ವಯಂಭುವನ್ನು ಸೇರಬಹುದು ಎಂಬುದನ್ನೂ ಇದು ಪ್ರತಿಮಿಸುತ್ತದೆ. ಸೂರ್ಯ-ಚಂದ್ರರು ಸ್ವಾಮಿಯ ಕಣ್ಣುಗಳು ಎಂಬ ಪರಂಪರೆಯ ನಂಬಿಕೆ ಸಾಹಿತ್ಯ ಪುರಾಣ ಕೃತಿಗಳಲ್ಲಿ ಪರಿಣಾಮಕಾರಿಯಾಗಿ ಮೂಡಿರುವುದನ್ನು ಕಾಣಬಹುದಾಗಿದೆ. (36ನೇ ಪುಟನೋಡಿ)



# ಇತಿಹಾಸದಲ್ಲಿ ಬ್ರಹ್ಮೋತ್ಸವ

ಮೂಲ : ಟಿ. ಕೆ. ಟಿ. ವೀರರಾಘವಾಚಾರ್ಯ.

ಬ್ರಹ್ಮೋತ್ಸವದ ದಿನಗಳ ಸಂಖ್ಯೆ ಎರಡರಿಂದ ಹದಿಮೂರಕ್ಕೆ ಏರಿದುದನ್ನು ಶಾಸನಗಳಿಂದ ತಿಳಿಯಬಹುದಾಗಿದೆ. ಉತ್ಸವ ವಿಗ್ರಹವನ್ನು ಬೀದಿ ಮೆರವಣಿಗೆಯಲ್ಲಿ ಬಿಜಯ ಮಾಡಿಸುವ ವಾಹನಗಳೂ ಕ್ರಮೇಣ ಹೆಚ್ಚುತ್ತ ಬಂದದ್ದನ್ನು ಕಾಣಬಹುದಾಗಿದೆ. ಶಾಸನಗಳ ಪ್ರಕಾರ ಮೊದಲನೆಯ ಬ್ರಹ್ಮೋತ್ಸವ ಹತ್ತುದಿನಗಳ ಕಾಲ ನಡೆಯಿತೆಂದೂ ಅದು ನಡೆದದ್ದು ಕ್ರಿ.ಶ. 966 ರಲ್ಲಿ ಎಂದೂ ತಿಳಿದುಬರುತ್ತದೆ. ಮೊದಲನೆಯ ದಿನ ಅಥವಾ ಅಂಕುರಾರ್ಪಣೆಯು ಬಹುಶಃ ಸಾಯಂಕಾಲದಲ್ಲಿ ಆರಂಭವಾದ ತಿರುವೀಧಿ ಮೆರವಣಿಗೆಯಂತರ ರಾತ್ರಿಯಲ್ಲಿ ನಡೆದ ಬೀಜಾವಾಪನೆಯಾಗಿರಬೇಕು. ಎರಡನೆಯ ದಿನ ಸಂಜೆ ವೈದಿಕ ವಿಧಿಗಳೊಡನೆ ಧ್ವಜಸ್ತಂಭದ ಮೇಲೆ ಧ್ವಜಾರೋಹಣ ನಡೆದು ನಂತರ ಮೆರವಣಿಗೆ - ತದನಂತರ ಪ್ರತಿದಿನ ಬೆಳಗಿನ ಹೊತ್ತು ಹಾಗೂ ಸಂಜೆಗಳಲ್ಲಿ ತಿರುವೀಧಿ ಮೆರವಣಿಗೆ ನಡೆದಿರಬೇಕು. ಆದರೆ ಯಾವ ವಿಗ್ರಹವನ್ನು ಮೆರವಣಿಗೆಯಲ್ಲಿ ತೆಗೆದುಕೊಂಡು ಬರಲಾಯಿತು ಎಂಬುದರ ಬಗ್ಗೆ ಖಚಿತವಾಗಿಲ್ಲ. ಅಂದಿಗೆ ಹೊಸದಾಗಿದ್ದ ಮೂಲಮೂರ್ತಿಯನ್ನೇ ಹೋಲುವ ಬೆಳ್ಳಿಯ ವಿಗ್ರಹವಂತೂ ಆಗಿರಲಾರದು. ಇನ್ನಾವುದೋ ಮೂರ್ತಿ ಆಗಿರಲಿಕ್ಕೂ ಸಾಕು. ಉತ್ಸವ ಅಂಕುರಾರ್ಪಣೆಯ ದಿನದಿಂದ ತೀರ್ಥವಾರಿಯವರೆಗೆ ಹತ್ತು ದಿನ ನಡೆಯಿತು.

ನಾಲ್ಕು ಶತಮಾನಗಳ ನಂತರ ಕ್ರಿ.ಶ. 1392 ರ ಒಂದು ಶಾಸನದಂತೆ ತೀರ್ಥವಾರಿಯ ಬಳಿಕ ವಿದಯಾತ್ರಿ (ವಿಡೈಯಾತ್ತಿರೈ) (ವಿದಾಯ - ಬೀಳ್ಕೊಡಿಗೆಯ ದಿನ) ಉತ್ಸವವನ್ನು ಆಚರಿಸಲು ಒಂದು ದಿನವನ್ನು ಜೋಡಿಸಲಾಯಿತೆಂದು ತಿಳಿದುಬರುತ್ತದೆ. ಈ ಹೊತ್ತಿಗಾಗಲೇ ವರ್ಷಕ್ಕೆ ಏಳು ಬ್ರಹ್ಮೋತ್ಸವಗಳಾಗುತ್ತಿದ್ದವು. ಹೊಸ ಉತ್ಸವಮೂರ್ತಿ - 'ಮಲೆಯಕುನಿಯ ನಿನ್ರ ಪೆರುಮಾಳ್' ಕ್ರಿ.ಶ. 1339 ರ ಹೊತ್ತಿಗೆ ಪ್ರವೇಶವಾಗಿರಬೇಕು. ಕ್ರಿ.ಶ. 1445 - 1447 ರ ವರ್ಷಗಳಲ್ಲಿ ಉತ್ಸವಕಾರ್ಯಕ್ರಮಗಳಲ್ಲಿ ಮತ್ತೂ ಹಲವು ಪರಿವರ್ತನೆಗಳನ್ನು ತಂದು ಹೊಸ ಅಂಶಗಳನ್ನು ಸೇರಿಸಲಾಯಿತು. ಅಂಕುರಾರ್ಪಣೆಯ (ತಿರುಮುಳೈ) ದಿನದಂದು ತಿರುಕಲ್ಯಾಣವೆಂಬ ಕಲ್ಯಾಣೋತ್ಸವವನ್ನು ಸೇರಿಸಲಾಯಿತು. ಅಂದು ಸಂಜೆ ಕೈಯರ್‌ಚಕ್ರಂ (ಪ್ರಾಯಶಃ ಚಕ್ರತ್ತಾಳ್ವಾರ್) ತಿರುವೀಧಿ ಮೆರವಣಿಗೆ ನಡೆದಿತ್ತು. ಕ್ರಿ.ಶ. 1545 ರ ಒಂದು ಶಾಸನದಲ್ಲಿ (ಒಂದು ಶತಮಾನದ ನಂತರ) ತಿರುಕಲ್ಯಾಣವು ಅಂಕುರಾರ್ಪಣೆಯ ದಿನದಲ್ಲಿಯಲ್ಲದೆ ಮೊದಲನೆಯದಿನ ನಡೆಯುವ ಉತ್ಸವವೆಂದು ಹೇಳಲಾಗಿದೆ. ಒಂಭತ್ತನೆಯ ದಿನ - ಸ್ವಾಮಿಪುಷ್ಕರಿಣಿಯಲ್ಲಿ ಚಕ್ರತ್ತಾಳ್ವಾರ್ ಸ್ನಾನಗೊಳ್ಳುವ ದಿನದ ರಾತ್ರಿ ಅಧಿವಾಸ ಹಾಗೂ ಧ್ವಜಾವರೋಹಣವೂ ನಡೆದಂತೆ ತಿಳಿಯುತ್ತದೆ. ಕ್ರಿ.ಶ. 1545 ರ ಶಾಸನದಲ್ಲಿ ಮೊದಲಬಾರಿಗೆ ಚೂರ್ಣ ಅಭಿಷೇಕದ ಉಲ್ಲೇಖ ಕಂಡುಬರುತ್ತದೆ. ಅಂದು ದೇವರ ಮುಂದೆ ಓಲಗದಲ್ಲಿ ಲೆಕ್ಕಗಳನ್ನು ನಿವೇದಿಸಲಾಗುತ್ತಿತ್ತು.

ಕ್ರಿ.ಶ. 1446 ರಲ್ಲಿ ಅಂಕುರಾರ್ಪಣೆ ದಿನದಿಂದ ಹನ್ನೊಂದನೆಯ ದಿನದಲ್ಲಿ ಪುಷ್ಪಯಾಗವನ್ನು ಸೇರಿಸಿದಂತೆ ತಿಳಿದುಬರುತ್ತದೆ. ಈ ದಿನದ ಪ್ರಾಮುಖ್ಯವನ್ನು 'ಪತ್ತಾಂತಿರು ನಾಳಿಲ್ ವಿಡೈಕೊಡುತ್ತು ಅರುಳುಂ ಪೋದು' ಎಂಬ ಪದಗಳಿಂದ ಸೂಚಿಸಲಾಗಿದೆ. ಇದರಿಂದಾಗಿ ಬ್ರಹ್ಮೋತ್ಸವದ ದಿನಗಳಲ್ಲಿ ಸಂರಕ್ಷಣೆಯ ಕೆಲಸ ನಿರ್ವಹಿಸಿದ ದೇವತೆಗಳಿಗೆ ಬೀಳ್ಕೊಡುಗೆ ನೀಡಲಾಯಿತೆಂದು ತಿಳಿಯಬೇಕು. ಈ ಸೇರ್ಪಡೆಗಳಿಂದಾಗಿ ಹತ್ತು ದಿನದ ಬ್ರಹ್ಮೋತ್ಸವ ಹನ್ನೆರಡು ದಿನಗಳದ್ದಾಯಿತು ಎಂದಾಯಿತು. ಈ ಸಂಖ್ಯೆ ಒಂದು ವಿದಯಾತ್ರೆ ದಿನವನ್ನು ಎರಡು ದಿನಗಳಿಗೇರಿಸಿದಾಗ ಹದಿಮೂರು ದಿನ ಮುಟ್ಟಿತು.

ಕ್ರಿ.ಶ. 1544 ರಲ್ಲಿ ಬ್ರಹ್ಮೋತ್ಸವಗಳಿಗೆ ಪೂರ್ವರಂಗ ಸಿದ್ಧತೆಯಲ್ಲಿ ಅವಶ್ಯವೆಂಬ ಒಂದು ಕಾರ್ಯಕ್ರಮವನ್ನು ಪ್ರವೇಶಗೊಳಿಸಲಾಯಿತು. ಇದೇ ಕೋಯಿಲ್ ಆಳ್ವಾರ್ ತಿರುಮಂಜನಂ. ತದನಂತರದ ಕಾಲದಲ್ಲಿ ಈ ಕಾರ್ಯಕ್ರಮ ಅತ್ಯಗತ್ಯ ಕಾರ್ಯಕ್ರಮವಾಗಿ ಇಂದಿಗೂ ಮುಂದುವರಿದಿದೆ. ಈ ದಿನದಂದು ಬೆಳಗಿನ ಪೂಜೆಗಳೆಲ್ಲ ಮುಗಿದ ಮೇಲೆ ಪೆರಿಯ ಪೆರುಮಾಳ್ ಹಾಗೂ ಬೆಳ್ಳಿಯ ಮೂರ್ತಿಯ ಹೊರತು ಗರ್ಭಗುಡಿಯ ಎಲ್ಲ ಪೂಜಾ ವಸ್ತು ಪರಿಕರ ಸಾಮಗ್ರಿಗಳನ್ನೂ ಬೇರೆಡೆಗೆ ತಂದು, ಒಳಗಿರುವ ವಿಗ್ರಹಗಳಿಗೆ ಜಲನಿರೋಧಕ ಕವಚ ತೊಡಿಸಿ, ಗರ್ಭಗೃಹವನ್ನು ನೀರಿನಿಂದ ತೊಳೆಯುತ್ತಾರೆ. ನಂತರ ಎಲ್ಲವನ್ನೂ ಅರಿಷಿಣ, ಕರ್ಪೂರ ಬೆರೆಸಿದ ಗಂಧದಿಂದ ಲೇಪಿಸಿ ಪುನಃ ತೊಳೆಯುವರು. ಹೀಗಾಗಿ ಇದೊಂದು ಪೂರ್ಣವಾಗಿ ಪರಿಶುಭ್ರತಾ ಪ್ರಕ್ರಿಯೆ. ಎಲ್ಲವನ್ನೂ ಶುಚಿಗೊಳಿಸಿದ ನಂತರ ಜಲನಿರೋಧಕ ಕವಚಗಳನ್ನು ತೆರೆದು ವೈದಿಕ ವಿಧಿಗಳನುಸಾರ ಪೂಜೆ ನಡೆಯುತ್ತದೆ. ದೊಡ್ಡ ಪ್ರಮಾಣದಲ್ಲಿ ನೈವೇದ್ಯವನ್ನು ಸಮರ್ಪಿಸಲಾಗುತ್ತದೆ. ಈ ಸೇವೆಯನ್ನು ಗೃಹಸ್ಥರು ಆರ್ಜಿತಸೇವಾ ಶುಲ್ಕ ನೀಡುವುದರಿಂದಲೂ (ಸಾಮಾನ್ಯ ವಾಗಿ ಮಂಗಳವಾರಗಳಲ್ಲಿ) ನಡೆಸಬಹುದು.

ಇಲ್ಲಿ ಗಮನಾರ್ಹ ಅಂಶವೆಂದರೆ ಬ್ರಹ್ಮೋತ್ಸವದ ದಿನಗಳಲ್ಲಿನ ಸೇರ್ಪಡೆಗಳೆಲ್ಲ ಮಲೆಯಕುನಿಯ ನಿನ್ರ ಪೆರುಮಾಳ್ (ಮಲೆಯಪ್ಪಸ್ವಾಮಿ) ಹಾಗೂ ಶ್ರೀದೇವಿ ಭೂದೇವಿಯರ ಆಗಮನದ ನಂತರವೇ (ಎಂದರೆ ಕ್ರಿ.ಶ. 1339 ರ ಸುಮಾರಿನ ನಂತರ) ಆದದ್ದು ಎಂಬುದು.

ಈಗ ಬ್ರಹ್ಮೋತ್ಸವದ ವಾಹನಗಳ ಬಗ್ಗೆ ಗಮನ ಹರಿಸಬಹುದು. ಪ್ರಾಚೀನಕಾಲದಲ್ಲಿ ಯಾವುದೇ ವಾಹನದ ಉಲ್ಲೇಖವೂ



ಕಂಡುಬರುವುದಿಲ್ಲ. ಇತರ ಹಬ್ಬ ಹರಿದಿನಗಳಲ್ಲಿ ಬಳಕೆಯಾಗುತ್ತಿದ್ದ ತಿರುಚ್ಚಿ (ಪಲ್ಲಕ್ಕಿ)ಯೇ ಬ್ರಹ್ಮೋತ್ಸವಗಳಲ್ಲೂ ಬಳಕೆಯಾಗುತ್ತಿದ್ದಿತೆಂದು ಹೇಳಬಹುದು. ಕ್ರಿ.ಶ. 1339, 1354, 1380 ರ ಶಾಸನಗಳಲ್ಲಿ ಚೇದಿಯರಾಯನ್ ಕಟ್ಟಿಸಿದ ತಿರುಚ್ಚಿಗೆ ಮಾತ್ರವೇ ಸ್ಥಳಾವಕಾಶವಿದ್ದಂತಹ ತಿರುಪ್ಪು ಮಂಟಪದಲ್ಲಿ ನೈವೇದ್ಯ ಮಾಡಲಾಗುತ್ತಿತ್ತುಎಂದು ಹೇಳಲಾಗಿದೆ. ಕ್ರಿ.ಶ. 1464 ರ ವರೆಗಿನ ಶಾಸನಗಳಾವುವೂ ಉತ್ಸವಗಳಲ್ಲಿ ವಾಹನಗಳನ್ನು ಬಳಸಲಾಗುತ್ತಿತ್ತೆಂದು ಹೇಳಿಲ್ಲ. ಆದರೆ ಕ್ರಿ.ಶ. 1235 ರಲ್ಲಿ ತಿರುಪತಿಯ ಗೋವಿಂದ ರಾಜಸ್ವಾಮಿಗಾಗಿ ವೀರನರಸಿಂಗ ಯಾದವ ರಾಯನು ನಾಲ್ಕುಗತ್ತೇರ್ (ನಾಲ್ಕು ಮುಖದ ರಥ) ಒಂದನ್ನು ನಿರ್ಮಿಸಿದನೆಂದು ಶಾಸನದ ಮೂಲಕ ತಿಳಿದುಬರುವುದರಿಂದ, ಆ ಹೊತ್ತಿಗಾಗಲೇ ತಿರುಮಲೆಯ ದೇವರಿಗೂ ಅಂತಹದೇ ಒಂದು ರಥ ಇದ್ದಿರಬೇಕು ಎಂದು ಊಹಿಸಬಹುದು. ಕ್ರಿ.ಶ. 1476 ರ ಶಾಸನದಲ್ಲಿ ಎರಡು ಬ್ರಹ್ಮೋತ್ಸವಗಳಲ್ಲಿ (ಪುರಟ್ಟಾಸಿ ಹಾಗೂ ಫಂಗುಣಿ ಬ್ರಹ್ಮೋತ್ಸವಗಳಲ್ಲಿ) ರಥವನ್ನು ಬಳಸಿದ ಉಲ್ಲೇಖವಿದೆ. ಈ ರಥಯಾತ್ರೆಯನ್ನು ಯಾವಾಗಲೂ ಧ್ವಜಾರೋಹಣದಿಂದ ಎಂಟನೆಯ ದಿನ ನಡೆಸಲಾಗುತ್ತಿತ್ತು. ಕ್ರಿ.ಶ. 1491 ರ ಒಂದು ಶಾಸನದ ಪ್ರಕಾರ ರಥಯಾತ್ರೆಯ ದಿನದ ರಾತ್ರಿ ಉತ್ಸವರನ್ನು ಅಶ್ವವಾಹನದಲ್ಲಿ ಕರೆದೊಯ್ಯಲಾಗುತ್ತಿದ್ದಿತು. ಅಶ್ವವಾಹನದ ಬಗ್ಗೆ ಇದೇ ಪ್ರಥಮ ಉಲ್ಲೇಖ. ಆದರೂ ಉತ್ಸವದ ಏಳನೇ ದಿನವೇ ಅತ್ಯಂತ ಪ್ರಧಾನದಿನವಾಗಿ, ಅಂದಿನ ದಿನಕ್ಕಾಗಿ ಪ್ರಸಾದ ನಿವೇದನೆಗಳಿಗಾಗಿ ಅಸಂಖ್ಯ ದಾನಗಳು ಹೇಳಲ್ಪಟ್ಟಿವೆ. ಉತ್ಸವದ ಒಂಭತ್ತನೆಯದಿನ - ಎಂದರೆ ತೀರ್ಥವಾರಿಯ ದಿನ ಬೆಳಗಿನ ಹೊತ್ತು ಶೇಷವಾಹನದ ಉಲ್ಲೇಖವಿದೆ. ಆದರಿದು ಪ್ರಚಲಿತ ಆಚಾರವಾಗಲಿಲ್ಲ. ಕ್ರಿ.ಶ. 1614 ರಿಂದ ಬೆಳ್ಳಿಯ ಶೇಷವಾಹನವನ್ನು ಮೊದಲನೆಯ ದಿನದ ರಾತ್ರಿ ವಾಹನವಾಗಿ ಬಳಕೆಗೆ ತರಲಾಗಿದೆ.

ಕ್ರಿ.ಶ. 1530 ರ ಒಂದು ಶಾಸನದಿಂದ ಬ್ರಹ್ಮೋತ್ಸವದ ಐದನೆಯ ದಿನ ಪ್ರಾತಃಕಾಲದ ಉತ್ಸವ ಶ್ರೀಕೃಷ್ಣನಿಗೆ ಸಂಬಂಧಿಸಿದುದಾಗಿಯೂ ಆ ದಿನದಂದು ಯಾವ ವಾಹನವೂ ಬಳಕೆ ಯಲ್ಲಿರಲಿಲ್ಲವೆಂದೂ ನಾವು ತಿಳಿಯಬಹುದು. ಆದರೆ ಅಂದು ರಾತ್ರಿ ಗರುಡವಾಹನದಲ್ಲಿ ಉತ್ಸವಮೂರ್ತಿಯೂ ಉಭಯ ನಾಚ್ಚಿಯಾರರೂ ಬೀದಿ ಮೆರವಣಿಗೆಯಲ್ಲಿ ಬರುತ್ತಿದ್ದರು. ಏನೇ ಆದರೂ ಕ್ರಿ.ಶ. 1530 ರ ವರೆಗೆ ಯಾವುದೇ ದಿನದಲ್ಲೂ ಗರುಡವಾಹನದ ಬಳಕೆಯ ಉಲ್ಲೇಖಗಳಿಲ್ಲ.

ಕ್ರಿ.ಶ. 1530 ರ ಶಾಸನದಂತೆ ತೈಮಾಸದ ಬ್ರಹ್ಮೋತ್ಸವದ ಆರನೇ ದಿನ ಅಣ್ಣಾ ಊಂಜಲ್ ಉತ್ಸವವನ್ನು ನಡೆಸಿದಂತೆ ತಿಳಿದುಬರುತ್ತದೆ. ಇದನ್ನು ರಾತ್ರಿಯ ಹೊತ್ತಿನಲ್ಲಿ ಆಚರಿಸಿದಂತೆ ಕಂಡುಬರುವುದು. ಇದೇ ಶಾಸನವು ರಥೋತ್ಸವವು ಏಳನೆಯ ದಿನ ನಡೆಯುತ್ತಿತ್ತೆಂದು ತಿಳಿಸುತ್ತದೆ. ಎಂಟನೆಯ ದಿನವೆಂಬುದನ್ನಿಲ್ಲಿ ತಪ್ಪಾಗಿ ಏಳನೆಯ ದಿನವೆಂದು ಗುರುತಿಸಿರಬೇಕು. ಕ್ರಿ.ಶ. 1564 ರಿಂದ ಸೂರ್ಯಪ್ರಭವಾಹನವೂ ವೈಕುಂಠವಿಮಾನವೂ ಬಳಕೆಗೆ ಬಂದಿರಬೇಕು. ಕ್ರಿ.ಶ. 1583 ರ ಒಂದು ಶಾಸನ ಹಂಸವಾಹನವನ್ನೂ ಗಜವಾಹನವನ್ನೂ ಕುರಿತು ಹೇಳುವುದು. ಕ್ರಿ.ಶ. 1614 ರ ಶಾಸನದಲ್ಲಿ ಬ್ರಹ್ಮೋತ್ಸವದ ಮೂರನೆಯ ದಿನ ರಾತ್ರಿ ಬಳಸಲೆಂದು ಒಂದು ಬೆಳ್ಳಿಯ ಸಿಂಹವಾಹನವನ್ನು ನೀಡಲಾಗಿದೆ. ಕ್ರಿ.ಶ. 1628 ರಲ್ಲಿ ಮಟ್ಲಕುಮಾರ ಅನಂತರಾಯನು ಒಂದು ಬಂಗಾರದ ಅಶ್ವವಾಹನ, ಒಂದು ಬೆಳ್ಳಿಯ ಗಜವಾಹನ, ಒಂದು ಸಮರ ಭೂಪಾಲವಾಹನ ಗಳನ್ನು (ಈಗ ಸರ್ವಭೂಪಾಲವಾಹನ ವೆನ್ನುವುದು) ಸಮರ್ಪಿಸಿದ. ಕ್ರಿ.ಶ. 1638 ರಲ್ಲಿ ವರ್ಷದಲ್ಲಿಹನ್ನೊಂದು ಬ್ರಹ್ಮೋತ್ಸವಗಳಿದ್ದರೂ ಇದರಲ್ಲಿ (ಪುರಟ್ಟಾಸಿ, ಕಾರ್ತೀಕೈ, ತೈ, ಪಂಗುಣಿ, ಆಣಿ ಮಾಸಗಳಲ್ಲಿ) ರಥೋತ್ಸವ ನಡೆಯುತ್ತಿತ್ತು. ಎಲ್ಲ ಬ್ರಹ್ಮೋತ್ಸವಗಳ ತೀರ್ಥವಾರಿಯೂ ಶ್ರವಣ ನಕ್ಷತ್ರದಲ್ಲಿ ಕೊನೆಗೊಳ್ಳುತ್ತಿರಲಿಲ್ಲ ಎಂಬುದನ್ನು ನೆನಪಿನಲ್ಲಿಡಬೇಕು. ದೇವರಾಯ ಮಹಾರಾಯನ ಆಶ್ವಯುಜ ಬ್ರಹ್ಮೋತ್ಸವ ಪುನರ್ವಸು ನಕ್ಷತ್ರದಲ್ಲಿ ಆರಂಭವಾಗಿ ಸ್ವಾತಿ ನಕ್ಷತ್ರದಲ್ಲಿ ಮುಗಿಯುತ್ತಿತ್ತು. ತಾಳ್ಳಪಾಕ ತಿರುವ[illegible] [illegible]ಯ್ಯಂಗಾರ್ಯನ ಆಣಿ ಬ್ರಹ್ಮೋ[illegible] ನಕ್ಷತ್ರದಲ್ಲಿ ಆರಂಭವಾಗಿ ಆತನ [illegible]ತರಾಯ ಮಹಾರಾಯನ ಜನ್ಮ[illegible]ದ ಮೃಗಶಿರದಲ್ಲಿ ಮು[illegible]ತ್ತು.

[illegible]ಹ್ಮೋತ್ಸವಗಳ ಬಗ್ಗೆ ವಿವರಗಳು ದೊ[illegible]ಲ್ಲ. ಆದ[illegible] ಇಲ್ಲಿಯೇ ಹೇಳಬಹುದಾದ ಒಂದು ಮಾತೆಂದರೆ ಕ್ರಿ.ಶ. 1616 ರಲ್ಲಿ ತಿರುಪತಿಯ ಗೋವಿಂದರಾಜಸ್ವಾಮಿ ದೇವಾಲಯದಲ್ಲಿ ವರ್ಷದಲ್ಲಿ ನಾಲ್ಕು - ವೈಯಾಸಿ, ಆಣಿ, ಆವಣಿ, ಮಾಸಿ ತಿಂಗಳುಗಳಲ್ಲಿ - ಬ್ರಹ್ಮೋತ್ಸವಗಳಾಗುತ್ತಿದ್ದವು.

ಮೇಲಿನ ವಿವರದಿಂದ ತಿಳಿದು ಬರುವ ಖಚಿತ ಅಂಶವೆಂದರೆ ಹಲವಾರು ಮಂದಿ ಭಕ್ತಜನರು ಬೇರೆ ಬೇರೆ ಕಾಲಾವಧಿಯಲ್ಲಿ ಕೈಗೊಂಡ ವಿವಿಧ ಕಾರ್ಯಕ್ರಮಗಳಿಂದಾಗಿ ಕ್ರಮೇಣ ಒಂದು ಪರಂಪರೆ ಸ್ಥಾಪಿತವಾಯಿತು ಎಂಬುದು.

ಒಂಭತ್ತನೆಯದಿನ ಬೆಳಗ್ಗೆ ಉಪಯೋಗಿಸ ಲಾಗುತ್ತಿದ್ದ ಶೇಷವಾಹನವನ್ನು ಇಂದು ಮೊದಲ ದಿನ ರಾತ್ರಿ ವಾಹನವನ್ನಾಗಿಯೂ ಮಾರನೆಯ ದಿನ ಬೆಳಗ್ಗೆ ಒಂದು ಕಿರಿಯ ಶೇಷವಾಹನವನ್ನೂ ಬಳಸಲಾಗುತ್ತಿದೆ. ಎರಡನೆಯ, ಮೂರನೆಯ ಹಾಗೂ ನಾಲ್ಕನೆಯ ಮತ್ತು ಏಳನೆಯ ದಿನ ಯಾವ ವಾಹನಗಳೂ ಮೊದಲಿಗೆ ಇರಲಿಲ್ಲ. ಶಾಸನಗಳು ಬ್ರಹ್ಮೋತ್ಸವ ಬೆಳೆದು ಬಂದ ಬಗೆಯನ್ನು ವಿವರಿಸುತ್ತವೆ.

ಗಮನಾರ್ಹವಾದ ವಿವರಗಳ ಮತ್ತೊಂದು ಅಂಶವೆಂದರೆ ಬ್ರಹ್ಮೋತ್ಸವ ಹಾಗೂ ಮತ್ತಿತರ ಉತ್ಸವಗಳಲ್ಲಿನ ಆಚರಣೆಯಲ್ಲಿ ಅವಿಭಾಜ್ಯ ಅಂಗವಾಗಿ ಸೇರಿರುವ ಉತ್ಸವದ ಘೋಷಣೆಯ ಅಂಗವಾದ ಅದಿರ್‌ವೆಡಿ ಎಂಬ ಆಲಯದ ಮುಂದೆ ಪಟಾಕಿ ಸ್ಫೋಟ ಕಾರ್ಯಕ್ರಮ. ಕಾಂಚೀಪುರಂಗೆ ಪ್ರಾಯಶಃ ಸೇರಿದ ಎಟ್ಟೂರು ತಿರುಮಲನಂಬಿ ತಾತಾಚಾರ್ಯರು ಪೆನಾಲಿ ಬಾಣ (ಬಾಣ ಬಿರುಸು) ಕ್ಕಾಗಿ ನೀಡಿದ 20 ರೇಖೈಪೊನ್ ದಾನದ ಬಗ್ಗೆ ತಿಳಿಸುವ ಕ್ರಿ.ಶ. 1583 ರ ಶಾಸನವೇ ಈ ಬಗೆಯವುಗಳಲ್ಲಿ ಮೊದಲನೆಯದು. ಅದಿರ್‌ವೆಡಿಯನ್ನು ಇಲ್ಲಿ ಹೇಳಿಲ್ಲ. ★

# ಹರಿದಾಸ ಸಾಹಿತ್ಯ ದರ್ಶನ

- ಆದ್ಯರಾಮಾಚಾರ್ಯ.

ಭಾರತೀಯ ತತ್ವಶಾಸ್ತ್ರದಲ್ಲಿ ಆಚಾರ್ಯ ಮಧ್ವರು ವಿಶ್ವಕ್ಕೆ ದ್ವೈತದರ್ಶನವನ್ನಿತ್ತರು. ಅದು ಹದಿಮೂರನೇ ಶತಮಾನದ ಕಾಲ. ಅವರು ತತ್ವವು ಕರ್ಮಾಚರಣೆಗೆ ವಿಶೇಷ ಮಹತ್ವವನ್ನಿತ್ತಿತು. ದ್ವೈತಮತ ಸ್ಥಾಪಕರೆನಿಸಿದ ಇವರನ್ನು ಮಧ್ವರೆಂದು, ಪೂರ್ಣಪ್ರಜ್ಞರೆಂದು, ಸರ್ವಜ್ಞರೆಂದೂ ಕರೆದರು. ಈ ಮಹಾನುಭಾವರ ಸಿದ್ಧಾಂತಗಳೆಲ್ಲ ದೇವನಾಗರಿಲಿಪಿಯಲ್ಲಿ ಸಂಸ್ಕೃತ ಭಾಷೆಯಲ್ಲಿದ್ದವು. ಸರ್ವಜ್ಞಾಚಾರ್ಯರೆಂದೆನಿಸಿಕೊಂಡ ಈ ಮಹಾನುಭಾವರು ಸಾರಿದ ತತ್ವಗಳು ಜನಸಾಮಾನ್ಯರಿಗೆ ಸುಲಭವಾಗಿ ಅರ್ಥವಾಗುವಂತೆ ಸ್ವತಃ ಮಧ್ವರೇ ತುಳು ಭಾಷೆಯಲ್ಲಿ ಆ ತತ್ವಗಳ ಸಾರವನ್ನು ರಚಿಸಿದರೆಂದು ಐತಿಹ್ಯ. ಆದರೆ ಅವರ ಶಿಷ್ಯ ಪರಂಪರೆಯವರೆನಿಸಿದ ನರಹರಿತೀರ್ಥರು, ಅನಂತರದಲ್ಲಿ ಬಂದ ಶ್ರೀಪಾದರಾಜರು ಹಾಗೂ ವ್ಯಾಸರಾಜರು, ವಾದಿರಾಜರು, ರಾಘವೇಂದ್ರ ಸ್ವಾಮಿಗಳು, ವ್ಯಾಸತತ್ವಜ್ಞರೇ ಮೊದಲಾದ ಯತಿಶ್ರೇಷ್ಠರಿಂದಲೂ ಸಹ ಆಚಾರ್ಯರ ತತ್ವಗಳ ಸಾರವು ಕ್ರಮವಾಗಿ ತಿಳಿಗನ್ನಡದಲ್ಲಿ ಪದ್ಯರೂಪದಲ್ಲಿ ಸುಳಾದಿಗಳು ಹಾಗೂ ಠಾಯಿ ಮೊದಲಾದ ಪ್ರಕಾರಗಳಲ್ಲಿ ಬೆಳಕಿಗೆ ಬರುವಂತಾದವು.

ಶ್ರೀಪಾದರಾಯರು ದಾಸಸಾಹಿತ್ಯದ ಆಚಾರ್ಯಪುರುಷರೆಂದೆನಿಸಿಕೊಂಡರು. ಅವರಿಂದ ಸಮಾಜವು ಹೊಸದೊಂದು ಕ್ರಾಂತಿಯನ್ನೇ ಕಾಣುವಂತಾಯಿತು. ಸಂಸ್ಕೃತ ಭಾಷೆಯ ಮಡಿವಂತಿಕೆಯ ಹೊದಿಕೆಯಿಂದ ದ್ವೈತವಾದವು ಜನಸಾಮಾನ್ಯರಿಗೆ ಸುಲಭವಾಗಿ ದೊರೆಯುವಂತಹ ಅವಕಾಶವು ಪ್ರಾಪ್ತವಾಯಿತು.

ಮಹಾನುಭಾವರಾದ ಶ್ರೀಪಾದರಿಂದ ಆರಂಭಗೊಂಡ ಈ ಸಾಹಿತ್ಯಕ್ಕೆ ಧ್ವಜಪತಾಕೆ ಹಿಡಿದು ನಿಂತವರು ವ್ಯಾಸರಾಜ ಯತಿಗಳು ಅವರ ಎಡಬಲದಲ್ಲಿ ಪುರಂದರದಾಸರು, ಕನಕದಾಸರು ಸನ್ನದ್ಧರಾಗಿ ನಿಂತರು. ಹೀಗಾಗಿ ವಿಜಯನಗರ ಸಾಮ್ರಾಜ್ಯದ ಕಾಲಾವಧಿಯಲ್ಲಿ ದಾಸಸಾಹಿತ್ಯದ ಉಗಮದೊಂದಿಗೆ ಅದು ವೈಭವದ ಉನ್ನತ ಸ್ಥಾನವನ್ನೂ ಸಹ ಗಳಿಸಿಕೊಂಡಿತು. ಮಹಾನುಭಾವರಾದ ವ್ಯಾಸರಾಜರ ಅಚ್ಚುಮೆಚ್ಚಿನ ಶಿಷ್ಯರಾದ ಪುರಂದರದಾಸರಿಂದ ರಚಿತವಾದ ಕೃತಿಗಳು ನಾಲ್ಕು ಲಕ್ಷ ಎಪ್ಪತ್ತೈದು ಸಾವಿರದಷ್ಟಿವೆ ಎಂಬ ಮಾತನ್ನು ಒಂದು ಪದ್ಯದಲ್ಲಿ ಉದಾಹರಿಸಿರುವುದು ಉಂಟು. ಇದರಿಂದಾಗಿ





ವ್ಯಾಸರಾಯರಿಂದಲೇ ಅವರು - ದಾಸರೆಂದರೆ ಪುರಂದರದಾಸರಯ್ಯ - ಎಂದೆನಿಸಿ ಕೊಂಡರಲ್ಲದೆ ಕರ್ನಾಟಕ ಸಂಗೀತ ಲೋಕದ ಪಿತಾಮಹರೆಂಬ ಹೆಗ್ಗಳಿಕೆಗೆ ಅವರು ಪಾತ್ರರಾದರು.

ಹರಿದಾಸರ ಪರಂಪರೆಯಲ್ಲಿ ಅವರು ತಾವು ಸಂಚರಿಸಿದ ಕ್ಷೇತ್ರ ಹಾಗೂ ಅಲ್ಲಿರುವ ತೀರ್ಥಗಳು ಹಾಗೂ ಅವುಗಳ ಮಹತಿಯೊಂದಿಗೆ ಅಂಥ ಕ್ಷೇತ್ರಗಳಿಗೆ ಹೋಗಿಬರುವುದರಿಂದಾಗಿ ದೊರೆಯುವ ಫಲ ಇತ್ಯಾದಿಗಳ ವರ್ಣನೆಗಳನ್ನೂ ಮಾಡಿದರು. ವ್ಯಾಸರಾಜರ ಶಿಷ್ಯರೆನಿಸಿದ ವಾದಿರಾಜ ಯತಿಗಳು ತೀರ್ಥಪ್ರಬಂಧ ಎಂಬ ಸೊಗಸಾದ ಕೃತಿಯೊಂದನ್ನು ಸಂಸ್ಕೃತದಲ್ಲಿ ರಚಿಸಿರುವುದುಂಟು. ಆ ಕೃತಿಯಲ್ಲಿ ಪಶ್ಚಿಮ ಪ್ರಬಂಧ, ಉತ್ತರ ಪ್ರಬಂಧ, ಪೂರ್ವ ಪ್ರಬಂಧ, ದಕ್ಷಿಣ ಪ್ರಬಂಧಗಳೆಂದು ನಾಲ್ಕು ಪ್ರಬಂಧಗಳನ್ನು ನಾಲ್ಕು ಪ್ರಾದೇಶಿಕ ರೀತಿಯಲ್ಲಿ ವಿಂಗಡಿಸಿದ್ದಾರೆ. ಇದೇ ಮಾದರಿಯಲ್ಲಿ ಹರಿದಾಸರಿಂದ ರಚಿತವಾದ ತೀರ್ಥಕ್ಷೇತ್ರಗಳು ಕೃತಿಗಳೂ ಇವೆ. ಅವುಗಳನ್ನೆಲ್ಲ ಸರಿಯಾಗಿ ವಿಂಗಡಿಸಿ ಉತ್ತರ ದಕ್ಷಿಣಗಳಂತೆ ವಿಭಾಗಿಸಿ ಒಂದು ಹೊತ್ತಿಗೆಯನ್ನು ಹೊರತಂದಲ್ಲಿ ಅದೊಂದು ತೀರ್ಥಕ್ಷೇತ್ರಗಳ ಪ್ರವಾಸಿಗಳಿಗೆಲ್ಲ ಒಳ್ಳೆ ಕೈಪಿಡಿಯಂತಹ ಹೊತ್ತಿಗೆಯಾಗಬಹುದು. ಈ ತರಹದ ಕೆಲಸವು ಇನ್ನು ಮೇಲಾದರೂ ಆದಲ್ಲಿ ಅದೊಂದು ಆಕರ ಗ್ರಂಥವಾಗುವುದರಲ್ಲಿ ಸಂದೇಹವಿಲ್ಲ.

ಪುರಂದರದಾಸರ ಸಾಹಿತ್ಯವು ಬಹು ಮುಖ್ಯವಾದುದು. ಅದನ್ನು ಜೀವನದರ್ಶನ, ಆಧ್ಯಾತ್ಮದರ್ಶನ, ತೀರ್ಥಕ್ಷೇತ್ರದರ್ಶನ, ಶ್ರೀಕೃಷ್ಣನ ಲೀಲಾದರ್ಶನ, ತಿರುಮಲಾಧೀಶನಾದ ಶ್ರೀನಿವಾಸನ ಮಹಿಮಾ ವರ್ಣನೆ - ಹೀಗೆ ಅನೇಕ ಪ್ರಾಕಾರಗಳನ್ನು ವಿಂಗಡಿಸಬಹುದು. ಅತ್ಯಂತ ಗಹನವಾದ ಶಾಸ್ತ್ರೀಯ ಸಿದ್ಧಾಂತಗಳನ್ನು ದಾಸರಾಯರು ಬಹು ಸುಲಭವಾಗಿ ಅರ್ಥವಾಗುವಂತೆ ತಿಳಿಗನ್ನಡದಲ್ಲಿ ಒದಗಿಸಿರುವುದುಂಟು. ಅವರ ಕೃತಿಗಳಲ್ಲಿ ಗ್ರಾಮಾಂತರ ನಿವಾಸಿಗಳಿಗೆ ಬಹು ಬೇಗನೇ ಅರ್ಥವಾಗುವಂತಹ ಶಬ್ದಗಳನ್ನು ಬಳಸಿದ ನೀತಿ ಪದ್ಯಗಳೂ ರೂಪುಗೊಂಡಿರುವುದುಂಟು. ಸಂಸ್ಕೃತ ಸಾಹಿತ್ಯದ ಭಂಡಾರವನ್ನೇ ಪ್ರಾಕೃತ ಭಾಷೆಯಲ್ಲಿ ತೆರೆದಿಟ್ಟು ಮಹೋಪಕಾರಗೈದವರೆಂದರೆ ನಮ್ಮ ಹರಿದಾಸರು.

ಪ್ರಾಕೃತಭಾಷೆಗೆ ಪರಿವರ್ತನಗೊಂಡ ಈ ಸಾಹಿತ್ಯವನ್ನು ಕೆಲವರು ಆಂಗ್ಲಭಾಷೆಗೆ ಹಾಗೂ ರಾಷ್ಟ್ರಬಾಷೆಯಾದ ಹಿಂದಿಗೂ ಪರಿವರ್ತನೆ ಮಾಡಿರುವುದುಂಟು. ದಾಸಸಾಹಿತ್ಯದಂತೆ ಆಳ್ವಾರುಗಳಿಂದ ರಚಿತವಾದ ದಿವ್ಯ ಪ್ರಬಂಧಗಳು ಅಥವಾ ನಾಲಾಯಿರ ಪ್ರಬಂಧಗಳು ಭಗವದ್ವಿಷಯಂ ಎಂಬ ಹೆಸರಿನಲ್ಲಿ ಮುದ್ರಣಗೊಳ್ಳುತ್ತಿವೆ ಎಂದು ತಿಳಿದು ಬಂದಿದೆ. ದಕ್ಷಿಣದ ಮಹಾ ಸಂಗೀತ ವಿದ್ವಾಂಸರೆನಿಸಿದ ಪಂ. ಬಾಲಮುರಳಿ ಕೃಷ್ಣರು ದಾಸರ ಪದಗಳನ್ನು ಆಂಧ್ರ ಬಾಷೆಗೆ ಪರಿವರ್ತನ ಮಾಡಿ ಕಛೇರಿ ಮಾಡಿರುವರೆಂಬುದನ್ನು ಕೇಳಿ ಬಹು ಸಂತೋಷವೆನಿಸಿದೆ. ಈ ರೀತಿ ತಮಿಳು ಭಾಷೆಗೂ ಈ ಸಾಹಿತ್ಯ ಪರಿವರ್ತಿತವಾಗ ತೊಡಗಿದೆ.

ಮಹಾಮಹಿಮರಾದ ಮಂತ್ರಾಲಯದ ರಾಘವೇಂದ್ರ ಯತಿಗಳಿಂದ ರಚಿತವಾದ 'ಇಂದು ಎನಗೆ ಗೋವಿಂದ' ಕೃತಿಯು ಅತ್ಯಂತ ಆರ್ತಭಾವದಿಂದ ಕೂಡಿದುದಾಗಿದೆ. ಲೋಕದಲ್ಲಿ ಗುರುಗಳ ಸಂಖ್ಯೆಯು ಅಪಾರ. ಆದರೆ ಯಾರು ತಮ್ಮ ಶಿಷ್ಯನ ಮನಸ್ಸು ಸದಾ ಕಾಲವೂ ಶ್ರೀಹರಿಯ ಧ್ಯಾನದಲ್ಲಿಯೇ ...ಲ್ಲುವಂತೆ ಅನುಗ್ರಹಿಸುವರೋ ಅವರೇ ನಿಜವಾದ ಗುರುಗಳೆಂದೆನಿಸಿಕೊಳ್ಳುವರು. ರಾಘವೇಂದ್ರತೀರ್ಥರನ್ನು ಕುರಿತು ಧನ್ವಂತರಿ ವಿಠ್ಠಲದಾಸರು ಈ ರೀತಿಯಾಗಿ ಹೇಳಿರುವುದುಂಟು.

ಸಾಧನವನು ನಾಕಾಣೆ, ಈ  
ಧರೆಯೊಳು ಪೂರ್ಣಬೋಧರ  
ದಿವ್ಯ ಕರುಣವೇ ಹೊರತು  
ನೀ ದಯವನು ಮಾಡೆ।  
ನಿತ್ಯಾನುಗ್ರಹ ಮಾಳ್ಪ  
ನಿಮ್ಮ ಪಾದಸೇವೆಯನ್ನಿತ್ತು  
ಪಾವನ್ನ ಮಾಡಿ ಮೋದವೀವುದು  
ಜಗದೊಳಗೆ ಗುರುವೆ''

- ಎಂದು ಪ್ರಾರ್ಥನೆ ಮಾಡಿಕೊಂಡಿದ್ದಾರೆ.

ಗುರುಮುಖದಿಂದ ಶ್ರೀ ವಾಯುದೇವನ ದ್ವಾರಾ ಜೀವನಿಗೆ ಮೋಕ್ಷವು ಸಾಧ್ಯ. ಆದುದರಿಂದ ಧರ್ಮಗ್ಲಾನಿಯಾದ ಸಂದರ್ಭದಲ್ಲಿ ಅನೇಕ ದೇವಾಂಶ ಸಂಭೂತರು ನಾನಾ ರೂಪದಲ್ಲಿ ನಾನಾ ಭಾಗದಲ್ಲಿ ಜನಿಸಿ ಲೋಕಕಲ್ಯಾಣಾರ್ಥವಾಗಿ ದೇವದೇವನ ಮಹಿಮಾತಿಶಯಗಳನ್ನು ಹೊಗಳುತ್ತ ಸಮಾಜವನ್ನು ಸನ್ಮಾರ್ಗದತ್ತ ಸಾಗಿಸಿಕೊಂಡು ಹೋಗುವ ಮಾರ್ಗವನ್ನೇ ದಾಸಪಂಥೀಯರೆಲ್ಲ ಮಾಡಿದ್ದಾರೆ. ಭಾರತದ ಪ್ರತಿಯೊಂದು ಪ್ರಾಂತದಲ್ಲಿಯೂ ಈ ತರಹದ ಭಕ್ತಿಪಂಥವು ಹುಟ್ಟಿಕೊಂಡು ಆಯಾ ಪ್ರಾಂತಗಳ ಪ್ರಾಂತೀಯ ಭಾಷೆಗಳಲ್ಲಿ ಭಗವಂತನ ಗುಣಗಾನವನ್ನು ಮಾಡಿ ಲೋಕವನ್ನು ಉದ್ಧರಿಸಲು ಪ್ರಯತ್ನಿಸಿದ ಉದಾಹರಣೆಗಳಿವೆ.

ಸರ್ವಶ್ರೇಷ್ಠವೆಂದೆನಿಸಿದ ವೈಕುಂಠ ಲೋಕವನ್ನು ತೊರೆದು, ಸಾಕ್ಷಾತ್ ರಮಾರಮಣನಾದ ಶ್ರೀಹರಿಯು ಲೋಕ ಕಲ್ಯಾಣಾರ್ಥವಾಗಿ ಸಪ್ತಗಿರಿಯಲ್ಲಿ ಬಂದು ನಿಂತು ಶ್ರೀನಿವಾಸನೆಂದು, ವೆಂಕಟಾಚಲಪತಿ ಎಂದು ಕರೆಸಿಕೊಳ್ಳುತ್ತಾ ನಾನಾ ರೀತಿಯಲ್ಲಿ ಹರಿದಾಸರಿಂದಲೂ ಮಹಾಭಕ್ತರೆನಿಸಿದ ಅನ್ನಮಾಚಾರ್ಯರಿಂದಲೂ ಸೇವೆಯನ್ನು ಸ್ವೀಕರಿಸಿದ್ದಾನೆ. ಅಷ್ಟೇ ಅಲ್ಲ, ಇಂದಿಗೂ ಆತನಿಗೆ ಈ ಹರಿದಾಸರ ಸೇವೆ ಬಹು ಪ್ರಿಯವೆಂದೆನಿಸತೊಡಗಿದೆ.

ಒಂದು ದೀಪ ಅಥವಾ ಪ್ರಕಾಶದಿಂದ ಅನೇಕ ದೀಪಗಳು ಬೆಳಗುವಂತೆ ಶ್ರೀಪಾದರಾಜರು, ವ್ಯಾಸರಾಜರು, ವಾದಿರಾಜರು, ವ್ಯಾಸತತ್ವಜ್ಞರೇ ಮೊದಲಾದ ಮಹಾನುಭಾವರಿಂದ ಕಾಲಾಂತರದಲ್ಲಿ ಹರಿದಾಸರೆಂಬ ಜ್ಯೋತಿಗಳು ನಾಡಿನ ತುಂಬೆಲ್ಲ

ಬೆಳಕನ್ನು ಚೆಲ್ಲುವಂತೆ ನಾಡಭಾಷೆಯಲ್ಲಿ ಸಾಹಿತ್ಯವನ್ನು ರಚಿಸಿದವು. ಅದನ್ನೇ ಸಂತಸಾಹಿತ್ಯವೆಂದು ಕರೆದರು. ಎಂದೂ ಬತ್ತಿಹೋಗದಂತೆ ಇಂದಿಗೂ ಕನ್ನಡನಾಡಿನಲ್ಲಿ ದಾಸಸಾಹಿತ್ಯದ ಪ್ರವಾಹವು ಬೆಳಗುತ್ತ ಸಾಗಿರುವುದು ನಾಡಿನ ಮಹಾಭಾಗ್ಯವೆಂದೆನಿಸುವುದು.

ವ್ಯಾಸರಾಯರಂತೆ ಪ್ರಸನ್ನ ವೆಂಕಟ ದಾಸರೂ ಸಹ ಬಹುಕಾಲ ತಿರುಮಲೆಯಲ್ಲಿದ್ದು ಆತನ ಸೇವೆಗೈದು ಆತನಿಂದ ಅನುಗ್ರಹಿತರಾಗಿ ಆ ದೇವನ ಹಸ್ತದಿಂದ ತಮ್ಮ ನಾಲಿಗೆಯ ಮೇಲೆ 'ಪ್ರಸನ್ನ ವೆಂಕಟ' ಎಂಬ ನಾಮವನ್ನು ಅಂಕಿತವಾಗಿ ಪಡೆದು ಅನೇಕ ಕೃತಿಗಳನ್ನು ರಚಿಸಿದರು. ಅದರಲ್ಲಿಯೂ ಅವರಿಂದ ರಚಿತವಾದ ಭಾಗವತದ ಸಾರವಂತೂ ಅಭ್ಯಾಸಿಗರಿಗೆ ರಸದೌತಣವನ್ನೀಯುವಂತಹುದು.

ಆನಂದತೀರ್ಥರಿಂದಲೇ ಆರಂಭಗೊಂಡ ಈ ಸಾಹಿತ್ಯ ವಾಹಿನಿಯು ಮುಂದೆ ವಿಜಯದಾಸರು, ಜಗನ್ನಾಥದಾಸರು, ಗೋಪಾಲದಾಸರು, ಕನಕದಾಸರು, ವೈಕುಂಠದಾಸರು, ಪ್ರಾಣೇಶದಾಸರು - ಹೀಗೆ ಒಂದೇ ಎರಡೇ - ಅನೇಕ ದಾಸರ ದೀಕ್ಷಾದಕ್ಷ ಪರಿಶ್ರಮದಿಂದ ಇಂದಿಗೂ ಓತಪ್ರೋತವಾಗಿ ಗಂಗಾಪ್ರವಾಹದಂತೆ ಆ ಸಾಹಿತ್ಯವು ಹರಿದು ಬರುತ್ತಿರುವುದು ನಾಡಿನ ಮಹಾಸೌಭಾಗ್ಯವೆಂದು ಭಾವಿಸಿದಲ್ಲಿ ತಪ್ಪಾಗಲಾರದು.

ಪುರಂದರದಾಸರಿಂದ ರಚಿತವಾದ ಕೆಲವೇ ಕೆಲವು ಕೃತಿಗಳನ್ನು ಕುರಿತು ಇಲ್ಲಿ ಉಲ್ಲೇಖಿಸುವುದು ವಿಹಿತವೆಂದೆನಿಸುವುದು. ಯಾಕೆಂದರೆ ಅವರ ಕೃತಿಗಳು ಬಹು ಅರ್ಥಗರ್ಭಿತವಾಗಿಯೂ, ವಿಚಾರ ಪೂರಿತವಾಗಿಯೂ ಇದ್ದು, ಆನಂದಾನುಭವಕ್ಕೆ ಸಾಧನೆಗಳಾಗಿವೆ. ಶ್ರೀಕೃಷ್ಣನ ಲೀಲೆಯನ್ನು ಕುರಿತು ವರ್ಣಿಸುವಾಗ ಸ್ವತಃ ಭಾವಪೂರಿತಾವಸ್ಥೆಗೆ ತಲುಪಿದರಲ್ಲದೆ, ಶ್ರೋತೃಗಳಿಗೂ ಸಹ ಆ ಅನುಭವವಾಗುವಂತೆ ಮಾಡಿದ್ದಾರೆ. ಉದಾಹರಣೆಗಾಗಿ ''ಪಿಳ್ಳಂಗೋವಿಯ ಚೆಲ್ವ ಕೃಷ್ಣನ ಎಲ್ಲಿ ನೋಡಿದಿರಿ, ನೀವೆಲ್ಲಿ ನೋಡಿದಿರಿ'' ಎಂಬ ಪದ್ಯ ಹಾಗೂ ''ಮನೆಯೊಳಗಾಡೋ ಗೋವಿಂದ'', ''ಬಾರಯ್ಯ ರಂಗ ಬಾರಯ್ಯ ಕೃಷ್ಣ'' ಮೊದಲಾದ ಅವರ ಕೃತಿಗಳು ಭಕ್ತರು ತಾವೂ ಸಹ ಶ್ರೀಕೃಷ್ಣನೊಂದಿಗೆ ಒಂದಾಗಿ ತಾದಾತ್ಮ್ಯ ಭಾವದಲ್ಲಿ ವಿಹರಿಸಿದ ಅನುಭವವನ್ನು ಹೊಂದುತ್ತಾರೆ. ಇನ್ನು ಅನುಭಾವದ ವಿಚಾರವಾಗಿ ರಚಿಸಿದ ಪದ್ಯಗಳಲ್ಲಿ ''ಅನುಭವದ ಅಡಿಗೆ ಮಾಡಿ'' ಹಾಗೂ ''ಅಂಬಿಗ ನಾ ನಿನ್ನ ನಂಬಿದೆ'' ಎಂಬ ಪದಗಳೂ ಸಹ ಸಾಧಕನ ಅಂತರಂಗದ ಶೋಧನೆಗೆ ಕಾರಣವಾಗುತ್ತವೆ. ವೈರಾಗ್ಯದ ವಿಚಾರದಲ್ಲಿ ''ಕೊಡುವ ಕರ್ತೃ ಬೇರೆ ಇರುತಿರೆ ಬಿಡು ಬಿಡು ಚಿಂತೆಯನು,'' ಅದೇ ರೀತಿ ''ಅಲ್ಲಿದೆ ನಮ್ಮ ಮನೆ ಇಲ್ಲಿರುವುದು ಸುಮ್ಮನೆ'' ಮೊದಲಾದ ಪದ್ಯಗಳು ಧರ್ಮದ ಸೂಕ್ಷ್ಮತೆಯೊಂದಿಗೆ ವೈರಾಗ್ಯದತ್ತ ಜೀವನ ಪಥವನ್ನು ತೋರಿಸುತ್ತವೆ. ಹೀಗೆ ಅನೇಕ ರೀತಿಯಲ್ಲಿ ಹರಿದಾಸರು ಮಾನವ ಜನಾಂಗದ ಉದ್ಧಾರಕ್ಕೆ ತಮ್ಮ ಸಹಜ ಹಾಗೂ ಸುಂದರವಾದ ಕೃತಿಗಳಿಂದ ಸಾತ್ವಿಕ ಜೀವರಿಗೆ ಸನ್ಮಾರ್ಗವನ್ನು ತೋರಿಸಲು ಯತ್ನಿಸಿದ್ದಾರೆ. ದಾಸರು ಬಿಟ್ಟುಹೋದ ಈ ಸಂಪತ್ತನ್ನು ರಕ್ಷಿಸಿಕೊಂಡು ಬರುವುದರೊಂದಿಗೆ ಅವರು ತೋರಿದ ದಾರಿಯಲ್ಲಿ ಸಾಗುವುದೇ ಮಾನವ ಸಹಜವಾದ ಮೋಕ್ಷಕ್ಕೆ ಸಾಧನವೆನಿಸಿದೆ. ★





# ಮಾವಿದ್ವಿಷಾವಹೈ

- ಡಾ॥ ಎಚ್. ವಿ. ನರಸಿಂಹಮೂರ್ತಿ.

ಜೀವನದಲ್ಲಿ ಸುಖವನ್ನು ಅನುಭವಿಸಬೇಕೆಂದು ನಾವೆಲ್ಲರೂ ಬಯಸುತ್ತೇವೆ. 'ಸುಖ ಬೇಡ; ಕಷ್ಟವೇ ಬರಲಿ' ಎಂದು ಯಾರೂ ಅಪೇಕ್ಷಿಸುವುದಿಲ್ಲ. 'ನಾನು ಸುಖವಾಗಿರಬೇಕು; ಅದಕ್ಕಾಗಿ ಹಲವಾರು ಜನರು ಕಷ್ಟಪಡಬೇಕು' - ಎನ್ನುವ ಜನರೂ ಇದ್ದಾರೆ. 'ನಾನು ಕಷ್ಟದಲ್ಲಿದ್ದೇನೆ; ಆದುದರಿಂದ ನನ್ನ ಕಣ್ಣೆದುರಿನಲ್ಲಿ ಯಾರೂ ಸೂಖದಿಂದ ಇರಬಾರದು' - ಎನ್ನುವವರಿದ್ದಾರೆ. 'ನನ್ನಂತೆಯೇ ಎಲ್ಲರೂ ಸುಖವಾಗಿರಲಿ' ಎಂದು ಭಾವಿಸುವವರೂ ಜಗತ್ತಿನಲ್ಲಿ ಇಲ್ಲದೆ ಇಲ್ಲ. 'ನನಗೆ ಎಷ್ಟೇ ಕಷ್ಟ ಬಂದರೂ ಇತರರಾದರೂ ಸುಖವಾಗಿರಲಿ' - ಎಂದು ಬಯಸುವ ಪುಣ್ಯಾತ್ಮರಿಗೂ ಜನ್ಮವಿತ್ತಿದೆ, ಈ ಭೂಮಿ.

ಸುಖಾಪೇಕ್ಷಿಗಳಾದ ನಾವು ಸುಖವನ್ನು ಪಡೆಯಬೇಕಾದರೆ ಸಮಾಜದ ಒಳಗಿದ್ದುಕೊಂಡೇ ಅದನ್ನು ಸಾಧಿಸಬೇಕು. ಸಮಾಜ ಪ್ರತಿಯೊಬ್ಬ ವ್ಯಕ್ತಿಯೂ 'ನಾನೊಬ್ಬನೇ ಸುಖವಾಗಿರಬೇಕು; ಅನ್ಯರು ಕಷ್ಟದಲ್ಲಿರಬೇಕು' ಎಂದು ಬಯಸಿದರೆ ಅವನು ಎಂದಿಗೂ ಸುಖವನ್ನು ಅನುಭವಿಸಲಾರ. ಬಹುಜನರ ದೃಷ್ಟಿಯಲ್ಲಿ ಅವನು ದೂಷಿತನಾಗುತ್ತಾನೆ. ತನ್ನ ಸುಖಕ್ಕಾಗಿ ಅನ್ಯರನ್ನು ಬಲಿಗೊಡುವವನು ಸಮಾಜಕಂಟಕನಾಗುತ್ತಾನೆ. ತನ್ನಂತೆ ಅನ್ಯರೂ ಕಷ್ಟದಲ್ಲಿರಬೇಕೆಂಬ ಭಾವನೆ ಮೂಡಿದರೂ ಸಹ ದ್ವೇಷ ಅವನ ಮನಸ್ಸಿನಲ್ಲಿ ಅಂಕುರಿಸುತ್ತದೆ.

ಆದರೆ 'ನಾನು ಕಷ್ಟದಲ್ಲಿದ್ದರೂ ಅನ್ಯರು ಸುಖವಾಗಿರಲಿ' ಎಂದು ಅಪೇಕ್ಷಿಸುವವರ ಮನದಲ್ಲಿ ಕರುಣೆ - ಪ್ರೇಮಗಳು ಮೂಡಿಬರುತ್ತವೆ. ತನ್ನಂತೆ ಪರರಸುಖವನ್ನು ಅಪೇಕ್ಷಿಸುವವರ ಅಥವಾ ತನ್ನನ್ನು ಮರೆತು ಪರಹಿತವನ್ನೇ ಚಿಂತಿಸುವವರ ಬಗೆಗೆ ಸಮಾಜವೂ ಪ್ರೀತಿ - ವಾತ್ಸಲ್ಯಗಳನ್ನು ಬೆಳೆಸಿಕೊಳ್ಳುತ್ತದೆ. ಅಂಥವರು ತಮ್ಮ ಬದುಕಿನಲ್ಲಿ ಉದ್ಭವಿಸುವ ಸಮಸ್ಯೆಗಳನ್ನು ಬಿಡಿಸುತ್ತಾರೆ. ಇಡೀ ಸಮಾಜದ ಜೀವನವನ್ನೇ ಸುಖಮಯವಾಗಿ ಇರಿಸಲು ಕಾರಣರಾಗುತ್ತಾರೆ. ಅಂತಹವರಿಂದ ಮಾತ್ರ ಸಮಾಜದಲ್ಲಿ ಸುಖ - ಶಾಂತಿಗಳು ನೆಲೆಸಲು ಸಾಧ್ಯವಾಗುತ್ತದೆ.

ಹೀಗೆ ದ್ವೇಷ ಎಲ್ಲರ ಕಷ್ಟಕ್ಕೆ ಕಾರಣ. ಮೈತ್ರಿ ಸರ್ವರ ಸುಖಕ್ಕೆ ಸಾಧನ. ಮಾನವರು ಅಲ್ಪಕಾರಣಕ್ಕಾಗಿ ಪರಸ್ಪರ ದ್ವೇಷವನ್ನು ಬೆಳೆಸಿಕೊಳ್ಳುತ್ತಾರೆ. ದ್ವೇಷ ಅಗ್ನಿಜ್ವಾಲೆಯಂತೆ ಹುಟ್ಟಿದ ಸ್ಥಳವನ್ನು, ಅದರ ಆವರಣಕ್ಕೆ ಸಿಕ್ಕಿದ ಎಲ್ಲವನ್ನೂ ಸುಡುತ್ತದೆ. ದ್ವೇಷಮಾಡುವವನು ತಾನೂ ಹಾಳಾಗುತ್ತಾನೆ; ಇತರರನ್ನೂ ಹಾಳುಮಾಡುತ್ತಾನೆ. ದ್ವೇಷದಿಂದ ನಾವು ನಮಗಾಗಿ ಏನನ್ನೂ ಸಾಧಿಸುವುದಿಲ್ಲ; ಪರರಿಗಾಗಿಯೂ ಯಾವುದನ್ನೂ ಸಾಧಿಸುವುದಿಲ್ಲ. ಆದುದರಿಂದ ದ್ವೇಷ ಜೀವನದ ಕಷ್ಟಗಳ ಮೂಲವಾಗುತ್ತದೆ. ಈ ಮೂಲವನ್ನೇ ನಾಶಮಾಡುವುದು ಸಂಭಾವಿತರ ಕರ್ತವ್ಯ. ದ್ವೇಷಮೂಡುವ ಸ್ಥಾನದಲ್ಲಿ ವಿಶ್ವಾಸ ಮೂಡುವಂತೆ ಮಾಡಿಕೊಳ್ಳಬೇಕು. ಅಂದರೆ ನಮ್ಮನ್ನು ದ್ವೇಷಿಸುವವರನ್ನು ಪ್ರೀತಿಸಲು ಪ್ರಯತ್ನಿಸಿದರೆ ನಾವೂ ಸುಖಿಗಳಾಗುತ್ತೇವೆ; ಇತರರೂ ಸುಖಿಗಳಾಗುತ್ತಾರೆ. ಒಬ್ಬ ಮನುಷ್ಯ ಮತ್ತೊಬ್ಬನನ್ನು ಯಾವುದಾದರೂ ಕಾರಣದಿಂದ ದ್ವೇಷ ಮಾಡುವುದಕ್ಕೆ ಆರಂಭಿಸಿ, ಆತನನ್ನು ನಾಶಮಾಡುವುದಕ್ಕೆ ಎಷ್ಟು ಕಾಲ, ಹಣ, ಶಕ್ತಿ, ಬುದ್ಧಿ-ಇತ್ಯಾದಿಗಳನ್ನುವ್ಯಯ ಮಾಡುತ್ತಾನೋ, ಅಷ್ಟನ್ನೇ ಇನ್ನೊಬ್ಬರ ಉದ್ಧಾರಕ್ಕಾಗಿ ವೆಚ್ಚ ಮಾಡಿದರೆ ಇಬ್ಬರೂ ಧನ್ಯರಾಗುತ್ತಾರೆ; ಇಬ್ಬರೂ ಸುಖಿಗಳಾಗುತ್ತಾರೆ.

ಆದರೆ ಪ್ರಾಣಿ ಸಹಜವಾದ ಗುಣವುಳ್ಳ ಮಾನವರಲ್ಲಿ ಅನ್ಯರನ್ನು ನಾಶ ಮಾಡುವುದಕ್ಕೆ ಮನಸ್ಸು ಒಲಿದಂತೆ ಅನ್ಯರ ಉದ್ಧಾರಕ್ಕೆ ಒಲಿಯುವುದಿಲ್ಲ. ಇಡೀ ಮಹಾಭಾರತ ದ್ವೇಷದ ಅಗ್ನಿಪರ್ವತವೇ ಆಗಿದೆ. ಕೌರವರಿಗೆ ಪಾಂಡವರ ಮೇಲೆ ಮೂಡಿ ಬಂದ ದ್ವೇಷ ಎಷ್ಟು ಅನರ್ಥಕ್ಕೆ ಕಾರಣವಾಯಿತು? ಜಗತ್ತಿನ ಇತಿಹಾಸದಲ್ಲಿ ಕಂಡುಬರುವ ಎಲ್ಲ ದುರ್ಘಟನೆಗಳಿಗೂ ದ್ವೇಷವೇ ಮೂಲವಾಗಿರುವುದನ್ನು ಕಾಣುತ್ತೇವೆ. ಆದರೆ ಪುರಾಣಗಳಿಂದಾಗಲಿ, ಇತಿಹಾಸದಿಂದಾಗಲಿ, ಅಥವಾ ನಮ್ಮ ಸ್ವಂತ ಅನುಭವದಿಂದಾಗಲಿ ದ್ವೇಷ ಮಾಡಿದವರು ಏನನ್ನು ಸಾಧಿಸಿದ್ದಾರೆಂದು ಪರಿಶೀಲಿಸಿದರೆ ಕೊನೆಗೆ ದ್ವೇಷಿಸಿದವರೇ ನಾಶವಾಗಿದ್ದಾರೆಂಬುದು ಖಚಿತವಾಗುತ್ತದೆ.

ಇದನ್ನರಿತ ನಮ್ಮ ಪೂರ್ವಿಕರು 'ಪರಸ್ಪರಂ ಭಾವಯಂತಃ ಶ್ರೇಯಃ ಪರಮವ್ಯಾಪ್ಯಥ' ಅಂದರೆ ಪರಸ್ಪರ ಹೊಂದಾಣಿಕೆಯಿಂದ ಶ್ರೇಯಸ್ಸನ್ನು ಸಾಧಿಸಿಕೊಳ್ಳಿ ಎಂದಿದ್ದಾರೆ. ಒಬ್ಬರಿಂದ ಮತ್ತೊಬ್ಬರನ್ನು ದೂರವಿಡುವುದು ದ್ವೇಷ; ಪರಸ್ಪರರನ್ನು ಒಂದು ಗೂಡಿಸುವುದು ವಿಶ್ವಾಸ. ಸಮಾಜ ಜೀವಿಗಳಾಗಿ ಬದುಕಬೇಕಾದ ಮಾನವರು ವಿಶ್ವಾಸದಿಂದ ಒಂದಾಗಿ ಬಾಳಬೇಕೇ ವಿನಹ ದ್ವೇಷದಿಂದ ದೂರವಾಗುವುದು ಯೋಗ್ಯವಲ್ಲ. ಆದ್ದರಿಂದ ಅನುಭವಿಗಳಾದ ಉಪನಿಷತ್ಕಾರರು 'ಸಹನಾವವತು ಸಹನೌ ಭುನಕ್ತು, ಸಹವೀರ್ಯಂ ಕರವಾವಹೈ, ತೇಜಸ್ವಿನಾವಧೀತಮಸ್ತು ಮಾವಿದ್ವಿಷಾವಹೈ' - ಕೂಡಿ ದುಡಿಯೋಣ, ಕೂಡಿ ಬಾಳೋಣ, ಕೂಡಿ ಬೆಳೆಯೋಣ, ಕೂಡಿ ಕಲಿಯೋಣ, ನಮ್ಮಲ್ಲಿ ಪರಸ್ಪರ ದ್ವೇಷ ಬಾರದಿರಲಿ - ಎಂಬ ಸಂದೇಶವನ್ನು ನಿತ್ಯಮಂತ್ರವಾಗಿ ನಮಗೆ ನೀಡಿದ್ದಾರೆ.

ದ್ವೇಷವನ್ನು ಅಳಿಸುವುದು ಕಷ್ಟಕರವಾಗಿ ಕಾಣಬಹುದು. ಸರ್ವ ಪ್ರಯತ್ನದಿಂದ ಅದನ್ನು ಅಳಿಸಿ, ಅಲ್ಲಿ ವಿಶ್ವಾಸವನ್ನು ನೆಲೆಗೊಳಿಸಿದರೆ ಅದರಿಂದ ಅಪಾರ ಲಾಭವಾಗುತ್ತದೆ. ಆದುದರಿಂದ ನಾವು ರಾಜಕೀಯವಾಗಿ, ಆರ್ಥಿಕವಾಗಿ, ಸಮಾಜಿಕವಾಗಿ, ಸಾಂಸ್ಕೃತಿಕವಾಗಿ ಏನಾದರೂ ಉನ್ನತಿಯನ್ನು ಸಾಧಿಸಬೇಕೆಂದಿದ್ದರೆ ಅದನ್ನು ವಿಶ್ವಾಸದಿಂದ ಸಾಧಿಸೋಣ; ದ್ವೇಷದಿಂದಲ್ಲ. ★



# ಶರಣಾಗತಿ

– ರಘುಸುತ.

ಭಗವಂತನಲ್ಲಿ ಪೂರ್ಣವಾಗಿ ತನ್ನನ್ನು ಅರ್ಪಿಸಿಕೊಳ್ಳುವಿಕೆಯೆ ಶರಣಾಗತಿ. ಇದರ ಮೂಲ ರಹಸ್ಯವೆಂದರೆ ಅವನಲ್ಲಿ ಸದಾ ನಿಶ್ಚಲ ಭಾವವನ್ನು ಹೊಂದಿದ್ದು, ತನ್ನ ಸಮಸ್ತ [illegible]ಶತೆಗಳನ್ನೂ, ಹಾಗೂ ದುರ್ಬಲತೆ ಗಳನ್ನೂ ಅರ್ಪಿಸುವುದು. ಇದನ್ನೆ 'ಆತ್ಮದಾನ' ಎಂದು ಕರೆಯಲಾಗುವುದು. ತನ್ನಲ್ಲಿನ ಅಪೂರ್ಣತೆಯನ್ನು ಭಗವಂತನ ಪೂರ್ಣತೆಯೆಂದು ತಿಳಿಯುವುದು, ತನ್ನಲ್ಲಿನ ಲೋಪಗಳನ್ನು ಅವನ ವಿಶಾಲತೆಯೆಂದು ಭಾವಿಸುವುದು ಹಾಗೂ ಅವೆಲ್ಲವನ್ನೂ ಅವನಿಗೇ ಅರ್ಪಿಸುವುದು ಪ್ರತಿ ಪಾಮರನನ್ನೂ ಜೀವಂತವಾಗಿರಿಸಲು ಪ್ರೇರಣೆ ನೀಡುತ್ತದೆ. ಮೊಟ್ಟಮೊದಲನೆಯದಾಗಿ ತನ್ನಲ್ಲಿನ ಅಹಂ ಅನ್ನು ಪ್ರತಿಯೊಬ್ಬನೂ ತ್ಯಜಿಸಬೇಕು. ಏಕೆಂದರೆ ಅನೈತಿಕ ವ್ಯವಹಾರಗಳನ್ನು ನಡೆಸುವುದಕ್ಕೆ ಇದೇ ಕಾರಣವಾಗುತ್ತದೆ. ಹೀಗೆ ಮಾಡುವುದರಿಂದ ಆ ವ್ಯಕ್ತಿಯ ನೈತಿಕ ಅಧಃಪತನವೂ ಆಗುತ್ತದೆ. ಇದನ್ನು ಪೂರ್ತಿಯಾಗಿ ತ್ಯಜಿಸುವುದೇ ನಿಜವಾದ ಶರಣಾಗತಿ.

ಭಗವಂತನ ಅನುಗ್ರಹವನ್ನು ಪಡೆಯದೆ ಯಾವನೇ ವ್ಯಕ್ತಿಯು 'ಅಹಂ' ಅನ್ನು ಪಡೆಯಲಾರ. ಇದರ ಮುಖ್ಯ ತಾತ್ಪರ್ಯವೆಂದರೆ ಅಹಂಕಾರದ ಸರಪಣಿಯಿಂದ ದೂರವಾಗಿ ಅನಂತಗುಣಗಣೈಕ ಪರಮಾತ್ಮನಲ್ಲಿ ಚರಣಗಳಲ್ಲಿ ತನ್ನನು ತಾನು ಅರ್ಪಿಸಿಕೊಳ್ಳುವುದೇ ಆಗಿದೆ. ಇದೇ ಶರಣಾಗತಿಯ ಅಂತಸ್ಸತ್ವ.

ಪರಮಾತ್ಮನೇ ತನಗೆ ನಿಜವಾದ ಆಶ್ರಯ, ಬೇರೆ ಯಾರೂ ಅಲ್ಲ ಎಂಬ ನಿರಾಶ್ರಯ ಭಾವವನ್ನು ಹೊಂದಿದಾಗ ಇದಕ್ಕೆ ಮಾರ್ಗವಾಗುತ್ತದೆ.

ಈ ಭಾವವನ್ನು ಸರಿಯಾದ ರೀತಿಯಲ್ಲಿ ಅರ್ಥ ಮಾಡಿಕೊಳ್ಳಲು ಶ್ರೀಮದ್ ಭಗವದ್ಗೀತೆಯಲ್ಲಿ ಕೃಷ್ಣಪರಮಾತ್ಮನು ತಿಳಿಸಿರುವ ಈ ಆಜ್ಞೆಯನ್ನು ನೆನಪಿನಲ್ಲಿಟ್ಟುಕೊಳ್ಳಬೇಕು.

ಸರ್ವ ಧರ್ಮಾನ್ ಪರಿತ್ಯಜ್ಯ
ಮಾಮೇಕಂ ಶರಣಂ ವ್ರಜ ।
ಅಹಂ ತ್ವಾ ಸರ್ವ ಪಾಪೇಭ್ಯೋ
ಮೋಕ್ಷ ಯಿಷ್ಯಾಮಿ ಮಾಂ ಶುಚಃ ॥

(18/66)

-ಅಂದರೆ 'ಎಲ್ಲ ಆಶ್ರಯ (ಧರ್ಮ)ಗಳನ್ನೂ ತ್ಯಜಿಸಿ ಸರ್ವಥಾ ನನ್ನನ್ನೇ ನಂಬಿ ನನಗೆ ಶರಣು ಬಾ. ಆಗ ನಿನ್ನ ಎಲ್ಲ ಪಾಪಗಳನ್ನೂ ದೂರಮಾಡುವೆನು, ಇದಕ್ಕಾಗಿ ದುಃಖಿಸದಿರು' ಎಂಬುದು.

ಹೀಗಾಗಿ ಪರಮಾತ್ಮನಲ್ಲಿ ತನ್ನೆಲ್ಲವನ್ನೂ ಅರ್ಪಿಸಬಿಡಬೇಕು.

ಶಾಸ್ತ್ರಗಳು ಆರು ರೀತಿಯ ಶರಣಾಗತಿಯನ್ನು ತಿಳಿಸುತ್ತವೆ. ಇದರ ಮುಖಾಂತರ ಪ್ರತಿಯೊಬ್ಬ ಜೀವಿಯೂ ಭಗವತ್ ಪ್ರಾಪ್ತಿಯನ್ನು ಪಡೆಯಬಹುದು. ಹೇಗೆಂದರೆ -

ಅನುಕೂಲಸ್ಯ ಸಂಕಲ್ಪಃ
ಪ್ರಾತಿಕೂಲಸ್ಯ ವರ್ಜನಮ್ ।
ರಕ್ಷಿಷ್ಯತೀತಿ ವಿಶ್ವಾಸೊ
ಗೋಪ್ತೃತ್ವವರಣಂ ತಥಾ ॥
ಆತ್ಮನಿಕ್ಷೇಪ ಕಾರ್ಪಣ್ಯೇ
ಷಡ್ವಿಧಾ ಶರಣಾಗತಿಃ ।

(ಅಹಿರ್ಬುಧ್ನ್ಯ ಸಂಹಿತಾ - 37/28-29)

ಇದೇ ಮಾತನ್ನು ಭಾರದ್ವಾಜ ಸಂಹಿತಾದಲ್ಲಿ ಹೀಗೆಂದು ತಿಳಿಸಲಾಗಿದೆ-

ಪ್ರಪತ್ತಿರಾನುಕೂಲಸ್ಯ
ಸಂಕಲ್ಪೋऽಪ್ರತಿಕೂಲತಾ ।
ವಿಶ್ವಾಸೊ ವರಣಂ ನ್ಯಾಸಃ
ಕಾರ್ಪಣ್ಯ ಮಿತಿ ಷಡ್ವಿಧಾ ॥

ಪ್ರಪತ್ತಿ ಅಥವಾ ಶರಣಗತಿಯಲ್ಲಿ ಆರು ಅಂಗಗಳಿವೆ - ಅವು ಯಾವುವೆಂದರೆ 1) ಪರಮಾತ್ಮನಿಗೆ ಅನುಕೂಲಕರವಾಗುವಂತೆ ನಡೆದುಕೊಳ್ಳುವುದು, 2) ಅವನು ಪ್ರತಿಯೊಬ್ಬರನ್ನೂ ಸಲಹುವನು ಎಂಬ ನಂಬಿಕೆ, 3) ಅವನೇ ರಕ್ಷಿಸುವನು ಎಂಬ ವಿಶ್ವಾಸ 4) ಅವನನ್ನೆ ರಕ್ಷಕನೆಂದು ನಂಬುವುದು, 5) ಆತ್ಮಸಮರ್ಪಣೆ ಮತ್ತು 6) ಸದಾ ದೀನನಾಗಿರುವುದು.

ಈ ಪದಗಳನ್ನು ಕ್ರಮುಕ್ರಮವಾಗಿ ಅವಲೋಕಿಸುವ :

**1. ಅನುಕೂಲಸ್ಯ ಸಂಕಲ್ಪಃ** - ಭಗವಂತನನ್ನು ಪ್ರಪತ್ತಿಯ ಮುಖಾಂತರ ಪಡೆದು ಅವನಿಗೆ ಅನುಕೂಲಕರವಾಗಿರುವುದು, ಆ ರೀತಿ ಸಂಕಲ್ಪಿಸುವುದು ಇದರ ಮೊದಲ ಅಂಗ. ಈ ಸಂಕಲ್ಪದೊಂದಿಗೆ ಆ ಸರ್ವ ಶರಣ್ಯನ ಬಗ್ಗೆ ಸಹಜ ಭಾಗವತ ಧರ್ಮದ ನಡವಳಿಕೆಗಳನ್ನು ಧಾರಣೆ ಮಾಡಿ, ಅವನನ್ನು ಆರಾಧಿಸುತ್ತಾ, 'ತತ್ ಸುಖಮ್ ಸುಖಿತ್ವಂ' ಎನ್ನುವ ಭಾವನೆಯನ್ನು ಅರಿತು ಅವನ ಕೈಂಕರ್ಯವನ್ನು ಮಾಡುತ್ತಿರಬೇಕು.

ಸಾಧಕನು ಯಾವುದೇ ಪರಿಸ್ಥಿತಿಯಲ್ಲಿ ಇದ್ದರೂನೂ ಒಂದೇ ಸಂಕಲ್ಪದಿಂದ ಭಗವನ್ ಮಂಗಳಾಶಾಸನವನ್ನು ಅನುಸರಿಸಬೇಕು. ಸಕಲ ಜೀವಿಗಳಿಗೂ ಹಿತವಾಗುವ ಹಾಗೂ ಪ್ರಿಯವಾಗುವಂತೆ ನಡೆದುಕೊಳ್ಳಲಿ. ಅಂದರೆ-

ಅನುಕೂಲಸ್ಯಮಿದಂ ಪ್ರೋಕ್ತಂ
ಸರ್ವಭೂತೇಷ್ವಾನುಕೂಲತಾ ।

ಉದಾಹರಣೆಗಾಗಿ ಈ ಘಟನೆಯನ್ನು ತೆಗೆದುಕೊಳ್ಳುವ - ಗೌತಮನ ಪತ್ನಿಯಾದ ಅಹಲ್ಯೆಯು ದೈವವಶಳಾಗಿ ಶಾಪವನ್ನು ಪಡೆದಳು. ಅವಳು ಶಿಲೆಯಾದ ಮೇಲೂ ಕೂಡ ಭಗವಂತನ ನಾಮಸ್ಮರಣೆಯಲ್ಲೆ ಇದ್ದಳು. ಇದರ ಪರಿಣಾಮವಾಗಿ ಭಗವಂತನ ಕೃಪೆಯಿಂದ ಅವಳ ಉದ್ಧಾರವಾಯಿತು.

**2. ಪ್ರತಿಕೂಲಸ್ಯ ವರ್ಜನಮ್ :** ಇದು ಶರಣಾಗತಿಯ ಎರಡನೇ ಅಂಗವಾಗಿದೆ. ಪರಮಾತ್ಮನ ಬಗ್ಗೆ ಪ್ರತಿಕೂಲದ ತ್ಯಾಗವನ್ನು ಇದರಲ್ಲಿ ತಿಳಿಸಲಾಗಿದೆ.



# ಸಪ್ತಗಿರಿ
## ಬರಹಗಾರರಿಗೆ ಸೂಚನೆ

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಆಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟನೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸಬೇಕು.

1) ಲೇಖನಗಳು ಆರು ಪುಲ್‌ಸ್ಕೇಲ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು. **ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ.**

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

6) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ :

**ಸಂಪಾದಕರು,**

ಸಪ್ತಗಿರಿ,
ತಿ.ತಿ. ದೇವಸ್ಥಾನಗಳು, ತಿರುಪತಿ - 517507,
ಚಿತ್ತೂರು ಜಿಲ್ಲೆ ಆಂಧ್ರಪ್ರದೇಶ.

(30ನೇ ಪುಟದಿಂದ)

ಮಾರನೆಯ ದಿನ ರಥೋತ್ಸವ. ಗರುಡೋತ್ಸವದಂತೆಯೇ ಇದೂ ಅತಿಹೆಚ್ಚಿನ ಜನರನ್ನು ಆಕರ್ಷಿಸುತ್ತದೆ. ಅಂದು ಬೆಳಗ್ಗೆ ಉಭಯನಾಚ್ಚಿಯಾರುಗಳೊಡನೆ ಮಲೆಯಪ್ಪ ಸ್ವಾಮಿಯು ವಿಶಿಷ್ಟ ಕಲಾವಿಲಸಿತವಾದ ರಥವನ್ನೇರಿ ಬರುತ್ತಿರುವಾಗ ಸಹಸ್ರಾರುಮಂದಿ ಭಕ್ತರು ಗೋವಿಂದ ನಾಮಸ್ಮರಣೆ, ಘೋಷಣೆ ಮಾಡುತ್ತಾರೆ. ರಥದ ಸುದೀರ್ಘ ಹಗ್ಗವನ್ನೆಳೆಯುತ್ತ ಅಸಂಖ್ಯ ಆಸ್ತಕರು ಶರೀರ ರಥವನ್ನು ಜ್ಞಾನಮಾರ್ಗದ ಮೂಲಕ ಎಳೆಯುತ್ತ ಸ್ವಾಮಿ ಸನ್ನಿಧಿಯನ್ನು ಸೇರಲು ಪ್ರಯತ್ನಿಸುವಂತೆ ಕಂಡುಬರುತ್ತಾರೆ.

ಅಂದು ರಾತ್ರಿ ಅಶ್ವವಾಹನ. ಮಲೆಯಪ್ಪ ಸ್ವಾಮಿಯು ವೀರಗಚ್ಚೆಹಾಕಿ, ತುರಗಾ ರೋಹಿಗಾಗಿ ಗ್ರಾಮೋತ್ಸವಕ್ಕೆ ಹೊರಡುತ್ತಾನೆ. ಸ್ವಾಮಿ ಇಂದ್ರಿಯಗಳ ಪ್ರಭು ವೆಂಬುದು ಇಲ್ಲಿ ಪ್ರಕಟವಾಗುತ್ತದೆ. ಜೀವಶಕ್ತಿಯ ಪ್ರತೀಕವಾಗಿ ಆಶ್ವಮನಃಶಾಸ್ತ್ರದಲ್ಲಿ ಪ್ರಸಿದ್ಧ. ಜೀವಸತಿ ದೇವಪತಿಭಾವ ಅಶ್ವವಾಹನದ ಸ್ವಾಮಿಯ ಸಂಕೇತಾರ್ಥವೆಂದೂ ಹೇಳಬಹುದು.

ಕಡೆಯ ದಿನ ಎಂದರೆ ಹತ್ತನೆಯದಿನವೇ ಅವಭೃಥಸ್ನಾನ, ಮಲೆಯಪ್ಪಸ್ವಾಮಿಯು ಉಭಯ ನಾಚ್ಚಿಯಾರುಗಳೊಡನೆ ಮೆರವಣಿಗೆಯಲ್ಲಿ ಸ್ವಾಮಿ ಪುಷ್ಕರಿಣಿಯ ಬಲಭಾಗದ ಆದಿವರಾಹಸ್ವಾಮಿ ಆಲಯಕ್ಕೆ ಬರುತ್ತಾರೆ, ಅಲ್ಲಿ ಶಾಸ್ತ್ರೋಕ್ತವಾಗಿ ಅವಭೃಥಸ್ನಾನ ಸಾಂಗವಾಗುತ್ತದೆ. ಬ್ರಹ್ಮೋತ್ಸವವು ಪೂರ್ಣವಾದದ್ದರ ಪ್ರತೀಕವಾಗಿ ಸುದರ್ಶನ ಚಕ್ರಕ್ಕೆ ಸ್ವಾಮಿ ಪುಷ್ಕರಿಣಿಯಲ್ಲಿ ಸ್ನಾನವಾಗುತ್ತದೆ. ಇದನ್ನು ಚಕ್ರಸ್ನಾನವೆಂದು ಹೇಳುವುದುಂಟು. ಈ ಚಕ್ರಸ್ನಾನದ ವೇಳೆಯಲ್ಲಿ ಪುಷ್ಕರಿಣಿಯಲ್ಲಿ ಸ್ನಾನಮಾಡುವವರು ವಾಕ್ಸಿದ್ಧಿ, ಧನಧಾನ್ಯ ಸಂಪತ್ತುಗಳ ವರ ಪಡೆಯುವರು.

ಹತ್ತು ದಿನಗಳ ಹಬ್ಬ ಮುಗಿದ ಈ ಹೊತ್ತಿನಲ್ಲಿ ಮಂಗಳಾಕ್ಷತೆ ವಿನಿಯೋಗವಾಗುತ್ತದೆ.

ಮೂರು ವರುಷಗಳಿಗೊಂದು ಬಾರಿ ಅಧಿಕ ಮಾಸಬರುತ್ತದೆ. ಆ ಸಂವತ್ಸರದಲ್ಲಿ ತಿರುಮಲೆ ಯಲ್ಲಿ ಆಶ್ವಯುಜಮಾಸದಲ್ಲಿ ನವರಾತ್ರಿಯಲ್ಲೂ ಒಂದು ಬ್ರಹ್ಮೋತ್ಸವ ನಡೆಯುತ್ತದೆ. ಇದನ್ನು ಎರಡನೆಯ ಬ್ರಹ್ಮೋತ್ಸವವೆನ್ನುತ್ತಾರೆ. ★

'ಶಾಸ್ತ್ರಗಳು ಹಾಗೂ ಸಂತರ ಮುಖಾಂತರ ತಿಳಿಸಿರುವ ಅಹಿತ ಕರ್ಮಗಳನ್ನು ಮಾಡದೇ ಇರುವುದೇ ಪ್ರತಿಕೂಲತೆಯ ತ್ಯಾಗ'. ಈ ರೀತಿಯ ಆಚರಣೆಗಳನ್ನು ಪ್ರಪನ್ನನು ಮಾಡಲೇಬಾರದು. ಇವೆಲ್ಲ ನಿಷಿದ್ಧವಾದವುಗಳು. ಇದನ್ನು 'ಪ್ರತಿಕೂಲಸ್ಯ ವರ್ಜನಮ್' ಎಂದು ಕರೆಯುತ್ತಾರೆ.

ಪತಿಗೆ ವಿರುದ್ಧವಾಗಿ ನಡೆದುಕೊಳ್ಳುವ ಸ್ತ್ರೀ ತಂದೆಗೆ ವ್ಯತಿರೇಕವಾಗಿ ನಡೆದುಕೊಳ್ಳುವ ಮಗ, ಶಾಸ್ತ್ರ ನಿಷಿದ್ಧವಾದ ಆಚರಣೆಗಳನ್ನು ಅನುಸರಿಸುವುದು - ಇತ್ಯಾದಿಗಳನ್ನು ಅನುಸರಿಸಿ ದಲ್ಲಿ ಅಂತಹವರಿಗೆ ದುರ್ಗತಿಯು ಪ್ರಾಪ್ತವಾಗುತ್ತದೆ. ಆದುದರಿಂದ ಪರಮಾತ್ಮನ ಶಾಸ್ತ್ರರೂಪ ಆಜ್ಞೆಗಳನ್ನು ಪಾಲಿಸಬೇಕಾಗಿದೆ. ಅವಕ್ಕೆ ವ್ಯತಿರೇಕವಾಗಿರುವುದನ್ನು ವರ್ಜಿಸ ಬೇಕಾಗಿದೆ.

ಯಃ ಶಾಸ್ತ್ರವಿಧಿಮುತ್ಸೃಜ್ಯ
ವರ್ತತೇ ಕಾಮಕಾರತಃ ।
ನ ಸ ಸಿದ್ಧಿಮವಾಪ್ನೋತಿ
ನ ಸುಖಂ ನ ಪರಾಂ ಗತಿಂ ॥

(ಗೀತಾ 16/23)

ಸಂತರ ಮುಖಾಂತರ, ಶಾಸ್ತ್ರಗಳ ಮುಖಾಂತರ ಯಾವ ನಿಷಿದ್ಧ ಕರ್ಮಗಳನ್ನು ತಿಳಿಸಲಾಗಿದೆಯೋ, ಅವುಗಳನ್ನು ಪ್ರಪನ್ನನು ಮುಟ್ಟಲೂ ಕೂಡದು. ಇದೇ 'ಪ್ರತಿ ಕೂಲಸ್ಯ ವರ್ಜನಮ್' ಎನ್ನುವುದು.

**3. ರಕ್ಷಿಷ್ಯತೀತಿ ವಿಶ್ವಾಸಃ :** 'ಪರಮಾತ್ಮನು ನಮ್ಮನ್ನು ರಕ್ಷಿಸುವನು. ಈ ಅಚಲವಾದ ನಂಬಿಕೆಯು ಯಾವಾಗ ಪ್ರಪನ್ನನ ಹೃದಯದಲ್ಲಿ ಉತ್ಪನ್ನವಾಗುವುದೊ ಆಗ 'ರಕ್ಷಿಷ್ಯತೀತಿ ವಿಶ್ವಾಸಃ' ಎನ್ನುವುದು ಸಾರ್ಥಕವಾಗುತ್ತದೆ.

ಸರ್ವ ಸಮರ್ಥನಾದ ಪ್ರಭುವು ಶರಣಾಗತರಾದವರನ್ನು ತಪ್ಪದೆ ರಕ್ಷಿಸುವನು. ಏಕೆಂದರೆ 'ತವಾಸ್ಮಿ ಜಾನಕೀಕಾಂತೊ ಮನಸಾ ವಾಚಾ ಕರ್ಮಣಾ' ಎಂಬಂತಾಗುತ್ತದೆ.

'ಪ್ರಭೋ! ನಿನ್ನ ಹೃದಯ ವಿಶಾಲವಾದುದು. ನೀನೇನೆ ಭಕ್ತರಿಗೆ ಈ ರೀತಿಯ ಅಭಯ ಹಸ್ತವನ್ನು ನೀಡಿರುವ -'

ಸಕೃದೇವ ಪ್ರಪನ್ನಾಯ
ತವಾಸ್ಮೀತಿ ಚ ಯಾಚತೇ।
ಅಭಯಂ ಸರ್ವಭೂತೇಭ್ಯೋ
ದದಾಮ್ಯೇತತ್ ವ್ರತಂ ಮಮ।
(ವಾ.ರಾ. ಯುದ್ಧಕಾಂಡ 18/33)

ಅಂದರೆ ಒಮ್ಮೆ ನಾನು ನಿನ್ನವನಾದರೆ, ಎಲ್ಲ ರೀತಿಗಳಲ್ಲಿಯೂ ಸದಾ ಕಾಲವೂ ನಿನ್ನವನೇ ಆಗಿರುತ್ತೇನೆ. ಇದೇ ನನ್ನ ಪ್ರತಿಜ್ಞೆಯಾಗಿದೆ.

ಈ ರೀತಿಯಲ್ಲಿ ಭಗವಂತನ ಆಜ್ಞೆಗಳನ್ನು ಪಾಲಿಸುವುದು ಪ್ರಪನ್ನನ ಕಾರ್ಯವಾಗುತ್ತದೆ. ಇದನ್ನು ವಿಭೀಷಣನ ವ್ಯಕ್ತಿತ್ವದಲ್ಲಿ ಕಾಣ ಬಹುದು. ಈತನ ತನ್ನಣ್ಣ ರಾವಣನ ವಿರುದ್ಧ ಸಿಡಿದೆದ್ದನು, ಎದುರು ತಿರುಗಿದನು. ಆದರೆ ಆತನು ಶ್ರೀರಾಮನ ಶರಣು ಹೊಂದಿದ. ಆದರೆ ಸುಗ್ರೀವ ಇತ್ಯಾದಿ ಕಪಿ ಶ್ರೇಷ್ಠರು ಆತನನ್ನು ಪ್ರಾರಂಭದಲ್ಲಿ ಸಂಶಯದಿಂದ ನೋಡಿದ್ದುಂಟು. ಆಗ ಹನುಮನು ಅವರುಗಳನ್ನು ಸಮಾಧಾನ ಗೊಳಿಸಿ, ಶ್ರೀರಾಮನಿಗೆ ಶರಣು ಹೋಗುವಂತೆ ಮಾಡಿದ. ಎಷ್ಟೇ ಆಗಲಿ ಆತ ತಾನೇ ಸ್ವತಃ ಶ್ರೀರಾಮನಿಗೆ ಶರಣಾದವನಲ್ಲವೆ? ಮಾನಸಿಕ ವಾಗಿ ತನ್ನನ್ನು ತಾನು ಆತನಿಗೆ ಅರ್ಪಿಸಿ ಕೊಂಡವನಲ್ಲವೆ?

**4. ಗೋಪ್ತೃತ್ವ ವರಣಂ :** - ತಾನು ಪರಮಾತ್ಮನಲ್ಲಿ ಶರಣು ಹೊಂದಿದ್ದೇನೆ ಎಂದು ಶರಣಾಗತನಾದವನು ಬಿನ್ನವಿಸಿಕೊಳ್ಳಬೇಕು. ತನ್ನಿಂದ ಕಾಯೇನ, ವಾಚಾ, ಮನಸಾ, ಕರ್ಮಗಳ ಮುಖಾಂತರ ಏನಾದರೂ ಅಪರಾಧವಾಗಿದ್ದಲ್ಲಿ ಅವನ್ನು ಕ್ಷಮಿಸಬೇಕು ಎಂದು ಪ್ರಾರ್ಥಿಸಬೇಕು. 'ಹೇ ದೇವ! ನಾನು ಪಾಪಿ! ನಿನ್ನಲ್ಲಿ ಮನಸ್ಸನ್ನು ಕೇಂದ್ರೀಕರಿಸುವುದಕ್ಕೆ ಆಗಲಿಲ್ಲ. ನೀನು ವಿಶಾಲ ಹೃದಯಿ. ನೀನೇ ನನ್ನನ್ನು ರಕ್ಷಿಸು! ನನಗೆ ಬೆಂಗಾವಲಾಗಿ ಇರು!' ಎಂದು ಅವನು ಬೇಡಿಕೊಂಡಾಗ ಆತನು ಖಂಡಿತ ಕ್ಷಮಿಸುವನು. ಇದನ್ನೇ 'ಗೋಪ್ತೃತ್ವವರಣ' ಎಂದು ಹೇಳುವುದು. ಇದೇ ಶರಣಾಗತಿಯ ನಾಲ್ಕನೇ ಅಂಗ.

**5. ಆತ್ಮನಿಕ್ಷೇಪ :-** ಪರಮಾತ್ಮನಲ್ಲಿ, ಆತನ ಶ್ರೀಚರಣಗಳಲ್ಲಿ ತನ್ನನ್ನು ತಾನು ಪ್ರಪನ್ನನು ಅರ್ಪಿಸಿಕೊಳ್ಳುವುದೇ ಶರಣಾಗತಿ. ಮಾನವನು ತನ್ನೆಲ್ಲವನ್ನೂ, ಮಾನಾಪಮಾನಗಳನ್ನು, ತನು, ಮನ, ಧನಗಳನ್ನು ಅರ್ಪಿಸುವನೊ ಆಗಲೇ ಅವನು ಕೃತಾರ್ಥನಾಗುವುದು. ಆಗ ಅವನ ಮನಸ್ಸು ಸರ್ವ ಸಮರ್ಪಣಾ ಭಾವದಿಂದ ಕೂಡಿದ್ದು ಆತ್ಮ ನಿಕ್ಷೇಪಗೊಳ್ಳುವುದು. ಕುಲೀನ ಸ್ತ್ರೀಯು ತನ್ನ ಸರ್ವಸ್ವವನ್ನೂ ತನ್ನ ಪತಿಗೇ ಅರ್ಪಿಸಿಕೊಳ್ಳುವಳು. ಆತನ ಸೇವೆಯನ್ನು ನಿರಂತರ ಮಾಡುವಳು. ಅನ್ಯ ಪುರುಷನನ್ನು ಕಣ್ಣೆತ್ತಿಯೂ ನೋಡುವುದಿಲ್ಲ. ಇದೇ ರೀತಿಯಲ್ಲಿ ಜೀವಾತ್ಮರೂಪಿ ಕನ್ಯೆಯು ಭಗವಂತನ ರೂಪದ ಪತಿಯನ್ನು ಸೇವಿಸುತ್ತಾ, ತನ್ನನ್ನೇ ಅವನಿಗೆ ಅರ್ಪಿಸಿಕೊಳ್ಳುವುದು ನಿಜವಾದ ಶರಣಾಗತಿಯಾಗುತ್ತದೆ. ಪ್ರಪನ್ನನು ತನ್ನ ಸರ್ವಸ್ವವನ್ನೂ ಶರಣ್ಯನ ಚರಣಗಳಲ್ಲಿ ಅರ್ಪಿಸಿಕೊಳ್ಳಬೇಕು. ದುರ್ಲಭವಾಗ ಬಹುದಾದ ಕೈಂಕರ್ಯವನ್ನು ಮಾಡಲು ಆತನಲ್ಲಿ ಬೇಡಬೇಕು. ಆತನ ಆಜ್ಞೆಯನ್ನು ಇದಕ್ಕಾಗಿ ಪಡೆಯಬೇಕು. ಈ ಕಾರ್ಯದಲ್ಲಿ ಅವನು ದೃಢ ಚಿತ್ತನಾಗಬೇಕು.

ನಾರದ ಪಾಂಚರಾತ್ರದಲ್ಲಿ ಹೀಗೆಂದು ತಿಳಿಸಲಾಗಿದೆ-

ಯೋಹಂ ಮಮಾಸ್ತಿ ಯತ್ ಯತ್ಕಿಂಚಿತ್
ಇಹಲೋಕೇ ಪರತ್ರ ಚ।
ತತ್ ಸರ್ವ ಭವತೋರೇವ
ಚರಣೇಷು ಸಮರ್ಪಿತಮ್॥
ತ್ವದೀಯಂ ವಸ್ತು ಗೋವಿಂದ
ತುಭ್ಯಮೇವ ಸಮರ್ಪಿತಮ್।

ಪ್ರಪನ್ನನು ತನ್ನ ಬಾಹ್ಯ ಹಾಗೂ ಆಂತರ್ಯಗಳನ್ನು ಹೂವಿನ ರೀತಿಯಲ್ಲಿ ಪರಮಾತ್ಮನ ಚರಣಗಳಲ್ಲಿ ಅರ್ಪಿಸಿಕೊಳ್ಳಬೇಕು.

**6. ಕಾರ್ಪಣ್ಯಮ್ :-** ಪರಮಾತ್ಮನಿಗೆ ಪ್ರತಿಯೋರ್ವನೂ ತನ್ನ ಕಾರ್ಪಣ್ಯವನ್ನು ನಿವೇದನ ಮಾಡಿಕೊಳ್ಳಬೇಕಾದುದು ಅವಶ್ಯಕ. ಕಾರ್ಪಣ್ಯತೆಯೆಂದರೆ ಸದಾ ಕಾಲದಲ್ಲೂ ಪ್ರಪನ್ನನು ದೀನತೆಯಿಂದ ಇರುವುದು. ದೈನ್ಯವನ್ನು ಅನುಸಂಧಾನ ಮಾಡುತ್ತಾ ಭಗವಂತನ ಸಮ್ಮುಖಹೋಗಬೇಕಾದುದು, ಇದನ್ನೇ ಆತನ ಎದುರುಗಡೆ ಪ್ರಕಟಿಸುವುದು ಶರಣಾಗತಿಯ ಸ್ವರೂಪವಾಗಿದೆ. ವಿಭೀಷಣನು ತನ್ನ ಕಾರ್ಪಣ್ಯ ಭಾವವನ್ನು ೀ ರೀತಿಯಲ್ಲಿ ನಿವೇದಿಸಿಕೊಳ್ಳುತ್ತಾನೆ-

ನಾಥ ದಾಸ್ಯಾನನ ಕರ ಮೈಂ ಭ್ರಾತಾ।
ನಿಸಿಚರ ಬಂಸ ಜನಮ ಸುರತ್ರಾ ತಾ॥
ಸಹಜ ಪಾಪಪ್ರಿಯ ತಾಮಸ ದೇಹಾ।
ಜಥಾ ಉಲೂಕಿಹಿ ತಮ ಪರ ಸೇಹಾ॥
(ತು. ರಾ.)

ಅನುಜೋ ರಾವಣಸ್ಯಾಹಂ
ಶರಣ್ಯಂ ಶರಣಂ ಗತಃ।
ಪರಿತ್ಯಕ್ತಾ ಮಯಾ ಲಂಕಾ
ಮಿತ್ರಾಣಿ ಚ ಧನಾನಿ ಚ॥
ಭವದ್ಗತಂ ಹಿ ಮೇ ರಾಜ್ಯಂ
ಜೀವಿತಂ ಚ ಸುಖಾನಿ ಚ॥
(ವಾ. ರಾ. ಯುದ್ಧಕಾಂಡ 19/4-6)

'ಭಗವಾನ್! ನಾನು ರಾವಣನ ಚಿಕ್ಕ ತಮ್ಮ. ನೀನು ಸಮಸ್ತ ಜೀವಿಗಳಿಗೂ ರಕ್ಷಣೆ ನೀಡುವವನು. ರಾವಣನು ನನಗೆ ಅವಮಾನ ಮಾಡಿದ್ದಾನೆ. ಆದುದರಿಂದ ನಾನು ನಿನಗೆ ಶರಣು ಬಂದಿದ್ದೇನೆ. ನಾನು ನನ್ನ ಸಮಸ್ತ ಮಿತ್ರ, ಧನ ಹಾಗೂ ಲಂಕಾನಗರವನ್ನು ಬಿಟ್ಟು ಬಂದಿದ್ದೇನೆ. ಈಗ ನನ್ನ ರಾಜ್ಯ, ಜೀವನ ಹಾಗೂ ಸುಖ ಎಲ್ಲವನ್ನೂ ನಿನ್ನ ಚರಣಗಳಲ್ಲಿ ಅರ್ಪಿಸುತ್ತಿದ್ದೇನೆ' - ಎಂದು ವಿಭೀಷಣನು ಹೇಳಿದನು.

ತನ್ನ ದೀನತೆಯನ್ನು ಅವನು ನಿವೇದನ ಮಾಡಿಕೊಂಡ ನಂತರ ಅವನು ಶ್ರೀರಾಮನಿಗೆ ಪ್ರಿಯನಾದನು.

ಈ ರೀತಿಯಲ್ಲಿ ಶರಣಾಗತಿಯಲ್ಲಿ ಆರು ಅಂಗಗಳ ಪ್ರಾಮುಖ್ಯತೆ ಇದೆ.

ಈ ಆರು ಅಂಗಗಳನ್ನು ಭಗವತ್ ಕೈಂಕರ್ಯವನ್ನು ಮಾಡಲು ಅನುವಾಗುವಂತೆ ಪ್ರತಿಯೊಬ್ಬನೂ ಪ್ರಯತ್ನಿಸಿ, ತನ್ನ ಜನ್ಮವನ್ನು ಸಾರ್ಥಕಗೊಳಿಸಿಕೊಳ್ಳಬೇಕು.

(ಆಧಾರ)



# ತಿರುಮಲೆ ತಿರುಪತಿ ದೇವಸ್ಥಾನಗಳು - ತಿರುಪತಿ

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ - ತಿರುಚಾನೂರು



# ಆರ್ಜಿತ ಸೇವೆಗಳು - ಉತ್ಸವಗಳು

| ಸೇವೆಗಳು | ದಿನ/ಕಾಲ | ಪ್ರವೇಶಾವಕಾಶ | ಶುಲ್ಕ |
|---|---|---|---|
| **ದೈನಂದಿನ ಸೇವೆಗಳು** | | | |
| ಸುಪ್ರಭಾತ | ಪ್ರಾ - 5-00 ಗಂ|| | 1 | ರೂ. 10-00 |
| | ಶುಕ್ರವಾರ ಪ್ರಾ - 4-00 ಗಂ|| | 1 | ರೂ. 10-00 |
| ಸಹಸ್ರನಾಮಾರ್ಚನೆ | ಪ್ರಾ - 5-30 ಗಂ|| | 1 | ರೂ. 10-00 |
| | ಶುಕ್ರವಾರ ಪ್ರಾ - 4-30 ಗಂ|| | 1 | ರೂ. 10-00 |
| ಪದ್ಮಾವತೀ ಪರಿಣಯ (ಕಲ್ಯಾಣೋತ್ಸವ) | ಪ್ರಾ - 10-30 ಗಂ|| | 5 | ರೂ. 500-00 |
| ಊಂಜಲ್ ಸೇವೆ | ಸಂ|| 5-00 ಗಂ|| | 2 | ರೂ. 116-00 |
| (ಡೋಲೋತ್ಸವ) | ಶುಕ್ರವಾರ ಸಂ|| 6-00 ಗಂ|| | 2 | ರೂ. 116-00 |
| ಏಕಾಂತ ಸೇವೆ | ರಾತ್ರಿ 9-00 ಗಂ|| | 1 | ರೂ. 10-00 |
| ಕುಂಕುಮಾರ್ಚನೆ | ಸರ್ವದರ್ಶನ ಸಮಯದಲ್ಲಿ | 2 | ರೂ. 200-00 |
| **ವಾಹನಸೇವೆಗಳು** | | | |
| ಗಜವಾಹನ | ಕಲ್ಯಾಣೋತ್ಸವದ ನಂತರ | 1 | ರೂ. 100-00 |
| ಗರುಡವಾಹನ | ಕಲ್ಯಾಣೋತ್ಸವದ ನಂತರ | 1 | ರೂ. 100-00 |
| ವಿಶೇಷ ಪ್ರವೇಶ | ಸರ್ವದರ್ಶನ ಸಮಯದಲ್ಲಿ | 1 | ರೂ. 10-00 |
| ಶೀಘ್ರ ದರ್ಶನ | ಸರ್ವದರ್ಶನ ಸಮಯದಲ್ಲಿ | 1 | ರೂ. 20-00 |
| **ವಾರ ಸೇವೆಗಳು** | | | |
| **ಅಷ್ಟದಳಪಾದ ಪದ್ಮಾರಾಧನೆ** | ಸೋಮವಾರ ಪ್ರಾ|| 6-30 ಗಂ|| | 5 | ರೂ. 1500-00 |
| (ಮೂಲವರಿಗೆ) (ಬಹುಮಾನ - 10 ಗ್ರಾಂನ ಬೆಳ್ಳಿಯ ಪದಕ - ಉತ್ತರೀಯ, ಕುಪ್ಪಸದ ಕಣ) | | | |
| **ತಿರುಪ್ಪಾವಡಾ** | ಗುರುವಾರ ಪ್ರಾ|| 7-00 ಗಂ|| | 5 | ರೂ. 3000-00 |
| ಬಹುಮಾನ - ಒಂದು ಉತ್ತರೀಯ, ಕುಪ್ಪಸದ ಕಣ, 20 ಲಾಡು, 20 ವಡೆ, 20 ಅಪ್ಪ, 20 ದೋಸೆ. | | | |
| ಅಭಿಷೇಕ (ಮೂಲವರಿಗೆ) | ಶುಕ್ರವಾರ ಪ್ರಾ|| 6-00 ಗಂ|| | 1 | ರೂ. 200-00 |
| ಶ್ರೀ ಲಕ್ಷ್ಮಿಪೂಜೆ | ಶುಕ್ರವಾರ ಪ್ರಾ|| 9-00 ಗಂ|| (ಬಹುಮಾನ - ಕುಪ್ಪಸದ ಕಣ) | 1 | ರೂ. 116-00 |
| **ಶಾಶ್ವತ ಸೇವೆಗಳು :** | | | |
| ಶಾಶ್ವತ ನಿತ್ಯ ಅರ್ಚನೆ | | | ರೂ. 1650-00 |
| ಶಾಶ್ವತ ಊಂಜಲ್ ಸೇವೆ | | | ರೂ. 1116-00 |

ಶಾಶ್ವತ ಸೇವೆ ಮಾಡಿಸುವ ಗೃಹಸ್ಥರಿಗೆ ಅವರ ಪೂರ್ಣ ಜೀವಮಾನ ಕಾಲದಲ್ಲಿ ವರ್ಷಕ್ಕೆ ಒಮ್ಮೆ ಸೇವೆಯನ್ನು ದರ್ಶಿಸುವ ಅವಕಾಶ ನೀಡಲಾಗುವುದು

**ಪ್ರಸಾದ ನಿವೇದನೆಗಳು :**

| | | |
|---|---|---|
| ದಧ್ಯೋದನ | ರೂ. | 250-00 |
| ಪುಳಿಯೋಗರೆ | ರೂ. | 275-00 |
| ಪೊಂಗಲ್ | ರೂ. | 325-00 |
| ಸಕ್ಕರೆ ಪೊಂಗಲ್ | ರೂ. | 375-00 |
| ಶಾಕರ ಬಾತ್ | ರೂ. | 400-00 |
| ಸೀರಾ | ರೂ. | 675-00 |
| ದೋಸೆ | ರೂ. | 200-00 |

**ಸೂಚನೆ :**

ಕಲ್ಯಾಣೋತ್ಸವ, ಊಂಜಲ್‌ಸೇವೆ - ಮತ್ತಿತರ ವಾರಸೇವೆಗಳಿಗೆ ಸೇವಾ ಟಿಕೆಟ್‌ಗಳು ಲಭ್ಯವಿರುವಂತೆ ಅಡ್ವಾನ್ಸ್ ರಿಸರ್ವೇಷನ್ ಅವಕಾಶವಿದೆ. ತಿರುಪ್ಪಾವಡ ಮತ್ತಿತ್ತರ ಪ್ರಸಾದ ನಿವೇದನೆಗಳಿಗೆ ಕನಿಷ್ಟ ಒಂದು ದಿನ ಮೊದಲಿಗೇ ಶುಲ್ಕ ನೀಡಬೇಕು. ಮೇಲಿನ ಸೇವಾ ಕಾಲಗಳಲ್ಲಿ ತುಸು ವ್ಯತ್ಯಾಸವಾಗಬಹುದು.

## ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ - ನಿತ್ಯ ಅನ್ನಪ್ರಸಾದ –ಯೋಜನೆ

ತಿರುಚಾನೂರು ಆಲಯವನ್ನು ಸಂದರ್ಶಿಸುವ ಯಾತ್ರಿಕರಿಗೆ ನಿರಂತರವಾಗಿ ದೇವರ ಪ್ರಸಾದ ವಿತರಣೆಯ ಉದ್ದೇಶದಿಂದ ಈ ಯೋಜನೆಯು ಆರಂಭವಾಗಿದೆ.

ಈ ಯೋಜನೆಗೆ ಕನಿಷ್ಟ ಪಕ್ಷ ರೂ. 1000-00 ನೀಡಬಹುದು. ರೂ. 1000-00 ಹಾಗೂ ಅದರ ಗುಣಕಗಳಲ್ಲಿ ಹಣವನ್ನು - ಕಾರ್ಯನಿರ್ವಹಣಾಧಿಕಾರಿ, ತಿ.ತಿ.ದೇ., ತಿರುಪತಿ - ಇವರ ಹೆಸರಿನಲ್ಲಿ ಪಡೆದ ಡಿ. ಡಿ. ಯನ್ನು ಎ.ಇ.ಓ. ಶ್ರೀ ತಿರುಚಾನೂರು ಆಲಯ, ತಿರುಚಾನೂರು - ಎ.ಪಿ. ಇವರಿಗೆ ಕಳುಹಿಸಬೇಕು.

## ಭಕ್ತರಲ್ಲಿ ಒಂದು ವಿನಂತಿ

## ಶ್ರೀ ಪದ್ಮಾವತೀ ಅಮ್ಮನವರ ವಿಮಾನ ಗೋಪುರದ ಚಿನ್ನದ ಮುಲಾಮೀಕರಣ

ತಿರುಚಾನೂರು ಶ್ರೀ ಪದ್ಮಾವತೀ ಅಮ್ಮನವರ ಆಲಯದ ವಿಮಾನ ಗೋಪುರವನ್ನೂ ಪ್ರಾಕಾರದೊಳಗಿನ ಗೋಡೆಗಳನ್ನೂ ಆರು ಕೋಟಿ ರೂಪಾಯಿಗಳ ವೆಚ್ಚದಲ್ಲಿ ಚಿನ್ನದ ಮುಲಾಮುಗೊಳಿಸುವ ಯೋಜನೆಯನ್ನು ಕೈಗೆತ್ತಿಕೊಳ್ಳಲಾಗಿದೆ.

ಈ ಒಂದು ಘನವಾದ ಕೈಂಕರ್ಯದಲ್ಲಿ ಪಾಲು ಪಡೆಯ ಬಯಸುವ ಭಕ್ತಾದಿಗಳು ತಮ್ಮ ವಂತಿಗೆಯನ್ನು - **ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ., ತಿರುಪತಿ** - ಇವರ ಹೆಸರಿನಲ್ಲಿ ಪಡೆದ ಡಿ.ಡಿ.ಯನ್ನು - ಅಸಿಸ್ಟೆಂಟ್ ಎಕ್ಸಿಕ್ಯುಟಿವ್ ಆಫೀಸರ್, ಶ್ರೀ ಪದ್ಮಾವತೀ ಅಮ್ಮನವರ ಆಲಯ, ತಿರುಚಾನೂರು - ಇವರಿಗೆ ಕಳುಹಿಸಿಕೊಡಬೇಕೆಂದು ವಿನಂತಿಸಲಾಗಿದೆ.

**ಕಾರ್ಯನಿರ್ವಹಣಾಧಿಕಾರಿ,**

ತಿ. ತಿ. ದೇ., ತಿರುಪತಿ.



# ಪ್ರಹ್ಲಾದನ ಮುಗ್ಧ ಭಕ್ತಿ

- ವಿದ್ವಾನ್ ಕಸ್ತೂರಿ ರಂಗರಾಜನ್

ಗೀತೆಯು ಭಕ್ತರನ್ನು ಆರ್ತ, ಅರ್ಥಾರ್ಥಿ ಜಿಜ್ಞಾಸು ಮತ್ತು ಜ್ಞಾನಿ ಎಂದು ನಾಲ್ಕು ವಿಧವಾಗಿ ವಿಂಗಡಿಸುತ್ತದೆ. ಆರ್ತಿಯು ಸಂಕಟ ಪರಿಹಾರಕ್ಕಾಗಿ, ಅರ್ಥಾರ್ಥಿಯು ಅರ್ಥಪ್ರಾಪ್ತಿಗಾಗಿ, ಜಿಜ್ಞಾಸುವು ತತ್ತ್ವವನ್ನು ಅರಿಯಲು ಮತ್ತು ಜ್ಞಾನಿಯು ದೇವರಿಗೋಸ್ಕರವೇ ದೇವರನ್ನು ಪ್ರಾರ್ಥಿಸುತ್ತಾನೆ. ಈ ನಾಲ್ವರೂ ಭಕ್ತರೇ. ಆದರೂ ಜ್ಞಾನಿಯೇ ಭಕ್ತಶ್ರೇಷ್ಠನೆಂದು ಶ್ರೀಕೃಷ್ಣನ ದಿವ್ಯವಾಣಿ. ಲೋಕದಲ್ಲಿ ಜ್ಞಾನ ಮತ್ತು ಭಕ್ತಿಗಳು ಬೇರೆಂದು ಎಣಿಸುವವರಿಗೆ ಇದು ಸಮರ್ಥ ಉತ್ತರ. ವಾಸ್ತವವಾಗಿ ಭಕ್ತಿಯ ಪರಾಕಾಷ್ಠೆಯೇ ಜ್ಞಾನ. ಇಲ್ಲಿ ಭಕ್ತನಿಗೆ ದೇವರೇ ಸರ್ವಸ್ವ.

ಮಹಾತ್ಮನಾದ ಅಂತಹ ಭಕ್ತನು ಲೋಕದಲ್ಲಿ ಅತಿ ದುರ್ಲಭನೇ ಸರಿ. ಆತನಿಗೆ ಸರ್ವವೂ ಬ್ರಹ್ಮವೇ. ವಿಶ್ವವೊಂದೆಡೆಯಿರಲಿ, ಆತನ ದೃಷ್ಟಿಯಲ್ಲಿ ತಾನೂ ಬ್ರಹ್ಮಸ್ವರೂಪನೇ. ಹೀಗೆ ಸರ್ವಂ ಖಲ್ವಿದಂ ಬ್ರಹ್ಮ ಮತ್ತು ಅಹಂಬ್ರಹ್ಮಾಸ್ಮಿ ಎಂಬ ಅನುಭವವಿರುವವನೇ ಜ್ಞಾನಿ. ಈ ಬಗ್ಗೆ ವೇದಾಂತಿಗಳಲ್ಲಿ ಏನೇ ಚರ್ಚೆಯಿರಲಿ, ಮುಗ್ಧ ಬಾಲಕನಾದ ಪ್ರಹ್ಲಾದನಿಗೆ ಈ ಅನುಭವವು ಆಗಿದ್ದಿತು ಎಂಬುದು ನಮಗೆ ವಿಷ್ಣು ಪುರಾಣದಿಂದ ತಿಳಿಯುತ್ತದೆ. ವಿಷ್ಣುಪುರಾಣದಲ್ಲಿ ಪ್ರಹ್ಲಾದನು ಹೀಗೆ ಹೇಳುತ್ತಾನೆ- ''ಮತ್ತ ಸರ್ವಂ, ಅಹಂ ಸರ್ವಂ, ಮಯಿ ಸರ್ವಂ'' ಎಂದು. ವಯಸ್ಸಿನಲ್ಲಿ ಕಿರಿಯನಾಗಿದ್ದರೂ ಭಕ್ತಿ ಜ್ಞಾನಗಳಲ್ಲಿ ಅವನು ಅದೆಷ್ಟು ಎತ್ತರಕ್ಕೆ ಏರಿದ್ದನು ಎಂಬುದು ನಮಗಿಲ್ಲಿ ಸ್ಪಷ್ಟವಾಗುತ್ತದೆ. ಆತನ ಈ ನುಡಿಯು ಉಪನಿಷತ್ತಿನ ''ಸರ್ವಂ ಖಲ್ವಿದಂ ಬ್ರಹ್ಮ'', ''ಅಹಂ ಬ್ರಹ್ಮಾಸ್ಮಿ'' ಮತ್ತು ಗೀತೆಯ ''ವಾಸುದೇವ ಸರ್ವಂ'' ಎಂಬ ಅನುಭವಗಳಿಗೆ ಸನಿಹವಾಗುತ್ತದೆ. ಇಂತಹ ಅನುಭವವನ್ನು ಹೊಂದಿರುವ ವ್ಯಕ್ತಿಗಳು ಲೋಕದಲ್ಲಿ ಅತಿವಿರಳವೇ. ವೇದಸಾಹಿತ್ಯದಲ್ಲಿ ವಾಮದೇವನಿಗೆ ಈ ದಿವ್ಯಾನುಭವವು ಆಗಿತ್ತೆಂದು ನಮಗೆ ಬೃಹದಾರಣ್ಯಕದಿಂದ ತಿಳಿಯುತ್ತದೆ. ಪುರಾಣ ಸಾಹಿತ್ಯದಲ್ಲಿ ಪ್ರಹ್ಲಾದನಿಗೆ ಇಂತಹ ಅನುಭವ ಕೂಡಿ ಬಂದಿದ್ದರೆ, ಚರಿತ್ರೆಯ ದೃಷ್ಟಿಯಲ್ಲಿ ಶಠಗೋಪರೆಂಬ ನಮ್ಮಾಳ್ವಾರರು ಈ ಅನುಭವವನ್ನು ಪಡೆದಿರುವುದು ಸ್ಪಷ್ಟವಾಗಿ ಕಂಡುಬರುತ್ತದೆ. ಇಂತಹ ಜ್ಞಾನಿ ಭಕ್ತರನ್ನು ಕುರಿತು ಗೀತೆಯು - ಈ ಕೆಳ ಕಂಡಂತೆ ಹೇಳುತ್ತದೆ.

ತಪಸ್ವಿಭ್ಯೋಽಧಿಕೋ ಯೋಗೀ
ಜ್ಞಾನಿಭ್ಯೋಽಪಿ ಮತೋಽಧಿಕಃ
ಕರ್ಮಿಭ್ಯಶ್ಚಾಧಿಕೋ ಯೋಗೀ
ತಸ್ಮಾದ್ಯೋಗೀಭವಾರ್ಜುನ

ಇಲ್ಲಿ ಯೋಗಿ ಎಂದರೆ ಭಕ್ತನೆಂದರ್ಥ. ಇಂತಹ ಭಕ್ತ ಶ್ರೇಷ್ಠನು ಪ್ರಹ್ಲಾದನಾಗಿದ್ದನು. ದೇವರನ್ನು ಕುರಿತ ಆತನ ಮುಗ್ಧ ಭಕ್ತಿ ಮತ್ತು ಆತನ ಧರ್ಮಪ್ರಜ್ಞೆಗಳು ದೈವನಿಂದಕನಾದ ತಂದೆಯೂ ಆತನನ್ನು ದ್ವೇಷಿಸುವಂತೆ ಮಾಡಿತ್ತು. ಪಿತೃವಾಕ್ಯ ಪರಿಪಾಲನಾರ್ಥವಾಗಿ ರಾಮನು ಕಾಡಿಗೆ ಹೋದನು ಎಂದು ಯಾವ ವೈದಿಕ ಮಾರ್ಗದವರು ಪ್ರತಿಪಾದಿಸುವರೋ, ಅವರೇ, ಇಲ್ಲಿ ತಂದೆಯನ್ನು ಎದುರು ಹಾಕಿಕೊಂಡನೆಂದು ವರ್ಣಿಸುವರು. ಇವೆರಡು ಘಟನೆಗಳು ಪರಸ್ಪರ ವಿರುದ್ಧವಾಗಿ ಕಂಡುಬಂದರೂ ಇವೆಲ್ಲಕ್ಕೂ ಹಿನ್ನೆಲೆಯಲ್ಲಿರುವ ಧರ್ಮಪ್ರಜ್ಞೆಯೇ ಪ್ರಧಾನ. ಆದ್ದರಿಂದಲೇ ಬಲ್ಲವರು ಹೇಳುವುದು - ಧರ್ಮವು ಅತಿ ಸೂಕ್ಷ್ಮವೆಂದು - ಇಂತಹ ಪ್ರಜ್ಞೆಯನ್ನು ಶ್ರೀರಾಮ ಮತ್ತು ಪ್ರಹ್ಲಾದ ಇವರಿಬ್ಬರೂ ಪಡೆದಿದ್ದುದರಿಂದಲೇ ಎರಡು ಘಟನೆಗಳೂ ಧರ್ಮದ ದೃಷ್ಟಿಯಲ್ಲಿ ನಡೆದಿವೆಯೇ ಹೊರತು ಕೇವಲ ಪೌರಾಣಿಕವಾಗಿ ನಡೆದಿಲ್ಲವೆಂಬುದು ವೇದ್ಯವಾಗುವುದು. ಒಂದು ಕಾಲದಲ್ಲಿ ಯಾವುದು ಧರ್ಮವಾಗಿತ್ತೋ ಅದು ಮತ್ತೊಂದು ಕಾಲದಲ್ಲಿ ಅಧರ್ಮವಾಗಲು ಸಾಧ್ಯವುಂಟು. ಪ್ರಹ್ಲಾದನಲ್ಲಿ ಅವನು ಗರ್ಭವಾಸದಲ್ಲಿರುವಾಗಲೇ ಈ ಧರ್ಮ ಪ್ರಜ್ಞೆಯು ರೂಢವಾಗಿತ್ತು. ಆದ್ದರಿಂದಲೇ, ಸಹಜವಾಗಿಯೇ ಅವನು ದೈವಭಕ್ತನಾಗಿದ್ದನು. ಹಿರಣ್ಯಕಶಿಪುವೂ ಒಂದು ರೀತಿಯಲ್ಲಿ ಭಕ್ತನೇ. ಏಕೆಂದರೆ ಆತನು ದೈವವನ್ನು ಸತತವಾಗಿ ದ್ವೇಷಿಸುವ ಮೂಲಕ ದೇವರನ್ನು ನಿರಂತರವಾಗಿ ಸ್ಮರಿಸುತ್ತಲೇ ಇದ್ದನು. ಆದರೆ, ಆತನಲ್ಲಿ ಭಕ್ತಿಯ ಇನ್ನೊಂದು ಲಕ್ಷಣದ ಕೊರತೆಯಿತ್ತು. ಅದೇ ಪ್ರೀತಿ. ದೇವರನ್ನು ಕುರಿತು ಆತನ ಸ್ಮರಣೆ ದ್ವೇಷಪೂರ್ವಕವಾದರೆ ಪ್ರಹ್ಲಾದನದು ಸ್ನೇಹ ಪೂರ್ವಕವಾಗಿದ್ದಿತು. ಈ ದಿಸೆಯಲ್ಲಿ ಪ್ರಹ್ಲಾದನು ''ಸ್ನೇಹಪೂರ್ವಕಮನುಧ್ಯಾನಂ'' ಎಂಬ ಭಕ್ತಿಯ ವ್ಯಾಖ್ಯೆಗೆ ಅಪ್ಪಟ ನಿದರ್ಶನನಾಗಿದ್ದಾನೆ. ಈ ವಿಷಯದಲ್ಲಿ ನಿಜವಾಗಿಯೂ ತಂದೆಗಿಂತಲೂ, ಮಗನೇ - ವಯಸ್ಸಿನಲ್ಲಿ ಕಿರಿಯನಾದರೂ ಅನುಭವದ ಉತ್ತುಂಗಕ್ಕೆ ಏರಿದ್ದನು.

ಈ ಸಂದರ್ಭದಲ್ಲಿ ಮತ್ತೊಂದು ಮಾತು - ಕೆಲವರು ಹಿರಣ್ಯಕಶಿಪು- ಪ್ರಹ್ಲಾದರ ವಿಷಯಕವಾಗಿ ಶೈವ - ವೈಷ್ಣವ ಸಂಘರ್ಷವನ್ನು ತರುತ್ತಾರೆ. ಇದು ಅನುಚಿತವಾದ ವಿಷಯವಾಗಿದೆ. ಹಿರಣ್ಯಕಶಿಪು ನಿಜವಾದ ಅರ್ಥದಲ್ಲಿ ಶಿವಭಕ್ತನಾಗಿದ್ದರೆ ಆತನು, ತಾನೇ ಲೋಕದ ಒಡೆಯನೆಂದೂ, ಇಡೀ ಜಗತ್ತೇ ತನ್ನನ್ನು ಪೂಜಿಸಬೇಕೆಂದೂ, ಜನರಿಗೆ, ದೇವತೆಗಳಿಗೆ ಬೆದರಿಕೆಯೊಡ್ಡುತ್ತಿರಲಿಲ್ಲ. ಶಿವನಲ್ಲಿ ಆತನಿಗೆ ಭಕ್ತಿಯ ಲವಲೇಶವೇನಾದರೂ ಇದ್ದಿದ್ದರೆ ಆತನು ಹೀಗೆ ಮಾಡುತ್ತಿರಲಿಲ್ಲವೇನೋ? ಆತನಲ್ಲಿದ್ದುದು ಪೂರ್ಣವಾದ ಅಹಂಕಾರ, ಆಸುರೀ ಸಂಪತ್ತು ಮಾತ್ರ. ಭಕ್ತಿ ಮತ್ತು ಅಹಂಕಾರಗಳು ಪರಸ್ಪರವಿರುದ್ಧವೇ ಸರಿ. ಹಿರಣ್ಯಕಶಿಪು ಅಹಂಕಾರದಿಂದ ತನ್ನ ಅವನತಿ ಪಡೆದನಾದರೆ ತನ್ನ ಮುಗ್ಧ ಭಕ್ತಿಯಿಂದ ಭಗವಂತನನ್ನೇ ಪೂರ್ಣ ವಶಮಾಡಿಕೊಂಡ ಅಸ್ವಾದೃಷ್ಯನಾದ ಮುಗ್ಧಬಾಲಕ ಪ್ರಹ್ಲಾದ.

★★★★★

Edited and Published on behalf T. T. Devasthanams by Dr. N. S. Ramamuthy and Printed at T. T. D. Press
by I. Parvateeswara Rao, B.A., L.P.T., Manager, T.T.D. Press, Tirupati - 517 507.













ತಿ. ತಿ. ದೇ. ಅಧ್ಯಕ್ಷರಿಂದ ಪ್ರಸಾದ ಸ್ವೀಕರಿಸುತ್ತಿರುವ
ಶ್ರೀಲಂಕಾ ದೇಶದ ಪ್ರಧಾನಮಂತ್ರಿ.

ಶ್ರೀ ಪದ್ಮಾವತೀ ಮಹಿಳಾ ಕಾಲೇಜಿನ ಸ್ವರ್ಣೋತ್ಸವಗಳಲ್ಲಿ
ಉಪನ್ಯಾಸ ನೀಡುತ್ತ ತಿ.ತಿ.ದೇ. ಅಧ್ಯಕ್ಷರು.

ಕಾರ್ಯನಿರ್ವಹಣಾಧಿಕಾರಿ ಡಾ|| ಪಿ. ಕೃಷ್ಣಯ್ಯನವರಿಂದ
ಪ್ರಸಾದ ಸ್ವೀಕರಿಸುತ್ತ ತಿ .ತಿ .ದೇ.
ಧರ್ಮಕರ್ತರಮಂಡಳಿಯ ಪದನಿಮಿತ್ತ ಸದಸ್ಯರು
ಶ್ರೀ ಅಜಯಕಲಾಂ

ತಿ.ತಿ.ದೇ. ಆಧ್ಯಾತ್ಮಿಕ ಶಿಕ್ಷಣ ಶಿಬಿರದಲ್ಲಿ
ಉಪನ್ಯಾಸ ಮಾಡುತ್ತ ಶ್ರೀ ಬಿ.ವಿ. ಪಟ್ಟಾಭಿರಾಮ್.

ಶ್ರೀವಾರಿ ಸೇವೆಯಲ್ಲಿ ಭಾಗವಹಿಸಿದವರನ್ನು ಉದ್ದೇಶಿಸಿ ಮಾತನಾಡುತ್ತ ಕಾರ್ಯನಿರ್ವಹಣಾಧಿಕಾರಿ ಡಾ|| ಪಿ. ಕೃಷ್ಣಯ್ಯ.
ಚಿತ್ರದಲ್ಲಿ - ಜೆ.ಇ.ಓ. ಶ್ರೀ ಬಾಲಸುಬ್ರಹ್ಮಣ್ಯಂ, ಪಿ. ಆರ್. ಓ. ಡಾ|| ಪಿ. ರಂಗರಾವ್ ಅವರುಗಳನ್ನು ಕಾಣಬಹುದು.